# ವ್ಯಭಿಚಾರಿಣಿ ಯಾರು

ಎಂ ಟಾಕೆ

ತೌಳವ ಪಲ್ಲವಿ ಗ್ರಂಥಮಾಲೆ — ಸುಮ ೮

# ವ್ಯಭಿಚಾರಿಣಿ ಯಾರು

(ಸಾಮಾಜಿಕ ನಾಟಕ)

ಕೆ. ಕಾಂತಪ್ಪ ಶೆಟ್ಟಿ

ಕಿರಿಯರ ಪ್ರಪಂಚ
ಉಡುಪಿ

೦—೮—೦

---

ಸಂಪಾದಕರು

ಕೆ. ಹೊನ್ನಯ್ಯ ಶೆಟ್ಟಿ
ಸಿ. ವೆಂಕಟರಮಣಾಚಾರ್ಯ



ಶ್ರೀ. ಕೆ. ಕಾಂತಪ್ಪ ಶೆಟ್ಟರು.

ವ್ಯಭಿಚಾರಿಣಿ ಯಾರು?
'ನಿಜದಾಂಪತ್ಯ', 'ಸಂಶಯಪಿಶಾಚಿ', 'ಕುಶಲವ', 'ಪುನರ್ವಿವಾಹ',
'ಯೋಗಿಯೊ ಭೋಗಿಯೊ', ಮೀರಾಬಾಯಿ'
ಮೊದಲಾದ ನಾಟಕಗಳ ಕರ್ತರು.





ಕಿರಿಯರ ಪ್ರಪಂಚದ ಸಂಪಾದಕರು.

# ಮುನ್ನುಡಿ

ಈ ನಾಟಕವು ಜನತೆಯ ಮುಂದೆ ಬರುವಾಗ ಅದರ ಪರಿಚಯಮಾಡಿಕೊಡುವ ಆವಶ್ಯಕತೆಯೂ ಇಲ್ಲ, ಅದರ ಕರ್ತರ ಪರಿಚಯಮಾಡಿಕೊಡುವ ಆವಶ್ಯಕತೆಯೂ ಇಲ್ಲ. ಇದು ಕೆಲವು ತಿಂಗಳುಗಳ ಹಿಂದೆ ಧಾರಾವಾಹಿಯಾಗಿ ನವಯುಗ ಪತ್ರಿಕೆಯಲ್ಲಿ ಪ್ರಕಟಿತವಾಗಿತ್ತು. ಅದರದೇ ಇದು ಒಂದು ಸಂಸ್ಕರಣ.

ನೈತಿಕ ಪತನದ ವಿವಿಧ ಸ್ವರೂಪಗಳನ್ನು ಇದು ಬಣ್ಣಿಸುತ್ತದೆ. ಆದರೂ ಇದರ ದೃಶ್ಯಗಳ ಚಲನೆಯು ಮುಖ್ಯವಾಗಿ ವಿದ್ಯಾವಂತ ಸ್ತ್ರೀಪುರುಷರ ನಡುವೆ. ಸ್ತ್ರೀ ಸ್ವಾತಂತ್ರ್ಯದ ಪ್ರಥಮ ಪರ್ಯಾಯದ ಅವ್ಯವಸ್ಥೆಗಳು ಇದರಲ್ಲಿ ಚಿತ್ರಿತವಾಗಿವೆ. ಇದರಿಂದ ಲೇಖಕರು ಸ್ತ್ರೀ ಸ್ವಾತಂತ್ರ್ಯದ ವಿರೋಧಿಗಳೆಂದು ಭಾವಿಸಲಾಗದು. ಸ್ವಾತಂತ್ರ್ಯವನ್ನು ಸ್ವೈರವರ್ತನೆಯೊಡನೆ ಗಲಿಬಿಲಿಮಾಡಿಕೊಂಡರೆ ಹೇಗೆ ನೈತಿಕ ಪತನವಾಗುವುದು ಎಂಬುದನ್ನು ತೋರಿಸುತ್ತಾ ವಿದ್ಯೆಯು ಅಹಂಕಾರದಾತ್ರಿಯಾಗಿದ್ದರೆ ಯಾವ ಯಾವ ಅನರ್ಥಗಳು ಸಂಭವಿಸುವವು ಎಂಬುದನ್ನೂ ಇದು ತೋರಿಸುತ್ತದೆ.

ನಾಟಕವು ಚೆನ್ನಾಗಿ ಕಂಡುದರಿಂದ ಅದನ್ನು ಪ್ರಕಟಿಸಿದ್ದೇವೆ. ಉಳಿದುದು ವಾಚಕರ ಕೈಯಲ್ಲಿ.

ಉಡುಪಿ
೧—೧೦—'೪೬

ಪ್ರಕಾಶಕರು.

# ಪಾತ್ರವರ್ಗ

## ಪುರುಷ:

ಪ್ರಭಾಕರ— ಕಥಾನಾಯಕ. ತಂದೆಯಿಂದ ವಂಚಿತನಾಗಿ ತನ್ನ ಪ್ರಣಯಿನಿಯಾಗಿದ್ದ ಸುಧೆಯನ್ನು ದುರಾಚಾರಿಣಿಯೆಂದು ತ್ಯಜಿಸಿ ವಿಲಾಸಿನಿಯಾದ ಲೀಲಾವತಿಯನ್ನು ವರಿಸಿ ಜೀವನಸುಖವನ್ನೇ ಮಣ್ಣುಗೂಡಿಸಿಕೊಂಡವ. ನಿಜವಾದ ವ್ಯಭಿಚಾರಿಣಿಯನ್ನು ಗೊತ್ತುಹಚ್ಚಿ ಸುಧೆಗಾಗಿ ಸರ್ವಸ್ವವನ್ನೂ ಕಳಕೊಂಡವ.

ಮುಕುಂದ— ಪ್ರಭಾಕರನ ತಂದೆ. ನಿವೃತ್ತ ಸಬ್‌ಜಡ್ಜಿ. ಮಗನನ್ನು ವಂಚಿಸಿ ವ್ಯಭಿಚಾರಿಣಿ ಹುಡುಗಿಯನ್ನು ವರಿಸುವಂತೆ ಮಾಡಿ ಅವನ ಸುಖಕ್ಕೆ ಕಲ್ಲಿಟ್ಟವ.

ಅಮೃತರಾಯ— ದುಡ್ಡಿಗಾಗಿ ಯಾವ ಕೆಲಸಮಾಡಲೂ ಸಿದ್ಧನಾದ 'ಏಜಂಟ'.

ಯಶವಂತರಾಯ— ಹೈಕೋರ್ಟ ಜಡ್ಜ. ಲೀಲಾವತಿಯ ತಂದೆ

ಕೊರಗ— ಸುಧೆಯನ್ನು ತಂದೆಯಂತೆ ಸಲಹಿದ ಸ್ವಾಮಿನಿಷ್ಠ ಸೇವಕ.

ಸಿದ್ಧಪ್ಪ— ಕಾಮುಕನಾದ ಶ್ರೀಮಂತ.

ಬಸಪ್ಪ— ಸಿದ್ಧಪ್ಪನ ಕಡೆಯವ.

ರಮಾನಾಥನ— ಯಶವಂತರಾಯನ 'ಫೆಮಿಲಿ' ಡಾಕ್ಟರ. ಲೀಲಾವತಿಯನ್ನು ಕೆಡಿಸಿದವ.

ವಾಮನ— ಮುಕುಂದರಾಯನ ಮನೆಯ ಅಡಿಗೆಯವ.

ಅರವಿಂದ— ಪ್ರಭಾಕರನ ಮಗು.

ದಫೇದಾರ—

ದಾರಿಗ—

ಪೋಲಿಸ್ ಇನ್ಸ್ಪೆಕ್ಟರ—

## ಸ್ತ್ರೀ:

ಸುಧೆ— ಕಥಾನಾಯಿಕೆ. ಒಂದು ಕ್ಷಣದ ಅವಿವೇಕದ ಫಲವಾಗಿ ಇಡೀ ಜೀವಮಾನವನ್ನೇ ಹಾಳುಮಾಡಿಕೊಂಡು ಪಶ್ಚಾತ್ತಾಪಪಡುವ ಸಚ್ಚರಿತೆ.

ತುಳಸಿ— ಸುಧೆಯ ತಾಯಿ.

ಲೀಲಾ— ಯಶವಂತರಾಯನ ಮಗಳು. ವಿಲಾಸಿನಿ. ಪ್ರಭಾಕರನ ಪತ್ನಿ. ವ್ಯಭಿಚಾರಿಣಿ.

# ವ್ಯಭಿಚಾರಿಣಿ ಯಾರು

## ೧ನೇ ದೃಶ್ಯ—ಮನೆ

[ಕಾಸರಗೋಡಿನ ಭವ್ಯವಾದೊಂದು ಮನೆಯ ಮನೋಹರ 'ಪೋರ್ಟಿಕೊ'ದಲ್ಲಿ, ನಿವೃತ್ತ ಸಬ್‌ಜಡ್ಜ ಮುಕುಂದರಾಯರು ಆರಾಮಕುರ್ಚಿಯಲ್ಲಿ ಕುಳಿತು, ಚುಟ್ಟಾ ಸೇದುತ್ತಿರುವರು ಅಂದು ಬೆಳಿಗ್ಗೆ ಅವರ ಮಗ ಪ್ರಭಾಕರನು ಬಿ ಎಲ್, ಪಾಸಾದನೆಂದು ಮದ್ರಾಸಿನಿಂದ ತಂತಿ ಬಂದಿತ್ತು. ಪ್ರಭಾಕರನು ಕೋಟು ಹಾಕಿಕೊಂಡು ಮಂಗಳೂರಿಗೆ ಹೋಗಲೆಂದು ತಂದೆಯೊಡನೆ ಹೇಳಲು ಅಂಜುತ್ತಂಜುತ್ತ ಆರಾಮ ಕುರ್ಚಿಯ ಹಿಂದೆ ಬಂದು ತುಸು ಹೊತ್ತು ನಿಲ್ಲುವನು. ರಾಯರು, ದಮ್ಮುಕಟ್ಟಿ ಎಳೆದು ನಿಧಾನವಾಗಿ ಬಿಡುವ ಚುಟ್ಟದ ಹೊಗೆಯು ಸುರುಳಿ ಸುರುಳಿಯಾಗಿ ಮೇಲಕ್ಕೇರುವುದನ್ನು ನೋಡುತ್ತಾ ಅದಾವುದೋ ಪ್ರಿಯ ಕಲ್ಪನೆಯಲ್ಲಿ ತನ್ಮಯರಾಗಿರುವರು. ಪ್ರಭಾಕರನು ಆರಾಮ ಕುರ್ಚಿಯ ಎಡಭಾಗಕ್ಕೆ ಸರಿದು ನಿಲ್ಲುವನು. ಮತ್ತೂ ಮುಕುಂದರಾಯರ ದೃಷ್ಟಿ ಅವನ ಮೇಲೆ ಬೀಳುವುದೇ ಇಲ್ಲ.]

**ಪ್ರಭಾಕರ**—(ಬಹಳ ಶಂಕಿಸಿ) ಅಪ್ಪಾ, ನಾನು ಮಂಗಳೂರಿಗೆ ಹೋಗಿ ಬರಲೇ? ನಾಳೆ ಮುಂಜಾನೆಯ 'ಶಟ್ಲ'ನಲ್ಲೇ ಹಿಂದೆ ಬರುತ್ತೇನೆ.

**ಮುಕುಂದ**—(ಫಕ್ಕನೆ ಬಾಯಿಂದ ಚುಟ್ಟಾ ತೆಗೆದು ಆರಾಮ ಕುರ್ಚಿಯ ಎಡ ಭಾಗಕ್ಕೆ ತಿರುಗಿ ಪ್ರಭಾಕರನನ್ನು ದಿಟ್ಟಿಸಿ ನೋಡಿ) ನಿನಗೇನು ಆಗಾಗ ಮಂಗಳೂರಿಗೆ ಹೋಗುವ ಕೆಲಸ?

**ಪ್ರಭಾಕರ**—ಕೆಲಸವೇನಿಲ್ಲ, ಪರೀಕ್ಷೆಯ ಫಲಿತಾಂಶ ತಿಳಿದೊಡನೆಯೇ ಮಂಗಳೂರಿಗೊಮ್ಮೆ ಬಂದುಹೋಗಬೇಕೆಂದು ನನ್ನ ಗೆಳೆಯರ ಆಗ್ರಹವಿರುವುದು. ಅಷ್ಟೆ.

**ಮುಕುಂದ**—ಅದಕ್ಕೇನು ಇಂದೇ ದಿನ ನೋಡಿರುವೆಯೊ?

**ಪ್ರಭಾಕರ**—ಇಂದೇ ತಪ್ಪದೆ ಬರುವೆನೆಂದು ಮಾತುಕೊಟ್ಟಿರುವೆನು.

**ಮುಕುಂದ**—ಯಾರಿಗೆ?

**ಪ್ರಭಾಕರ**—ಮದ್ರಾಸಿನಲ್ಲಿ ನನ್ನೊಂದಿಗೆ ಕಲಿಯುತ್ತಿದ್ದ ಆಪ್ತ ಮಿತ್ರರಿಬ್ಬರಿಗೆ.

**ಮುಕುಂದ**—ಮಾತುಮೀರಲು ಸಾಧ್ಯವೇ ಇಲ್ಲವೇ?

**ಪ್ರಭಾಕರ**—ಹೋಗಿಬರುವೆನಪ್ಪಾ! ನಿಮಗೇನೀಗ? ನಾಳೆ ಬೆಳಿಗ್ಗೆ ತಪ್ಪದೆ ಬರುವೆನು.

**ಮುಕುಂದ**—(**ಆರಾಮಕುರ್ಚಿಯಲ್ಲಿ ಸರಿಯಾಗಿ ಕೂತು ಚುಟ್ಟಾಸೇದಿ ಹೊಗೆಯನ್ನು ಪುಸ್ಸನೆ ಬಿಟ್ಟು ಪ್ರಭಾಕರನತ್ತ ನೋಡದೆ**) ಹೋಗು! ಹೋಗು! ನನ್ನೊಡನೆ ಕೇಳುವುದೇನನ್ನು? ನಿನ್ನಿಚ್ಛಾನುಸಾರ ಮಾಡು!

**ಪ್ರಭಾಕರ**—ಅಪ್ಪಾ! ಅದೇಕೆ ಹಾಗೆನ್ನುವಿರಿ?

**ಮುಕುಂದ**—ನಾನು ಹೋಗಕೂಡದೆಂದರೂ ನೀನು ಕೇಳುವೆಯಾ? ನಿನ್ನ ಮನಸ್ಸೀಗ ನಿನ್ನಾಧೀನವಿದೆಯೇ?

**ಪ್ರಭಾಕರ**—ಮತ್ತಾರಾಧೀನವಿದೆ?

**ಮುಕುಂದ**—(**ಪುನಃ ಫಕ್ಕನೆ ಆರಾಮ ಕುರ್ಚಿಯಿಂದ ಎಡಕ್ಕೆ ತಿರುಗಿ ಪ್ರಭಾಕರನನ್ನು ದಿಟ್ಟಿಸಿ**) ಮತ್ತಾರಾಧೀನವಿದೆಯೆಂದು ನಾನು ಬಾಯ್ಬಿಟ್ಟು ಹೇಳಬೇಕೇ? ಯಾರೊಡನೆ ಈ ನಟನೆಯಿಲ್ಲ?

**ಪ್ರಭಾಕರ**—ಏನು ನಟನೆ?

**ಮುಕುಂದ**—(**ಚುಟ್ಟದ ಕಡೆಯನ್ನು ಸಿಟ್ಟಿನಿಂದ ಬಿಸುಟು**) ಏನು ನಟನೆಯೇ? ನೀನಾ ತುಳಸಿಯ ಮನೆಗೆ ಹೋಗಬಾರದೆಂದು ಎಷ್ಟು ಬಾರಿ ಹೇಳಿದೆ ನಾನು? ನೀನೆಲ್ಲಿ ಕೇಳುವೆ?

**ಪ್ರಭಾಕರ**—ತುಳಸೀ ಬಾಯಿಯವರ ಮನೆಗೆ ಹೋದರೇನಾಯಿತು?

**ಮುಕುಂದ**—(**ಮತ್ತಷ್ಟು ಸಿಟ್ಟಿನಿಂದ ನೆಟ್ಟಗೆ ಕುಳಿತು**) ಹೋದರೇನಾಯಿತೇ? ನಾನು ಹೋಗಬಾರದೆಂದ ಮೇಲೆ—ಹೋದರೇನಾಯಿತೇ?

**ಪ್ರಭಾಕರ**—ಅಪ್ಪಾ, ನಾನು ಬಿ. ಎ. ಕಲಿಯುವಾಗ ತುಳಸಿಬಾಯಿಯವರು ನನ್ನನ್ನು ೨ ವರ್ಷ ತನ್ನ ಮಗನಂತೆಯೇ ನೋಡುತ್ತಿದ್ದರು. ಇದು ಹೊರತು ಅವರು ನಮ್ಮ ಸಂಬಂಧಿಕರಂತೆ. ನಾನು ...........

**ಮುಕುಂದ**—(**ನಡುವೆ ಬಾಯಿ ಹಾಕಿ**) ಸಂಬಂಧಿಕರಂತೆ! ಎಂತಹ ಸಂಬಂಧವಂತೆ ಅದು? ಅವಳೇನು ಸಾಧಾರಣದವಳಲ್ಲ! ನೋಡುವಾಗ ಮಾತ್ರ ಪಾಪದವಳಂತಿದ್ದಾಳೆ. ನಿನ್ನನ್ನು ಮಗನಂತೆ ನೋಡುತ್ತಿದ್ದುದು ಸುಮ್ಮನಲ್ಲ ಅವಳು. ಹೆಂಗಸರೇನು ಸಾಮಾನ್ಯ 'ಪ್ಲೇನಿ'ನವರಲ್ಲ!

**ಪ್ರಭಾಕರ**—ನಿಮಗೆ ತಿಳಿದಿಲ್ಲವೆ ನಮ್ಮ ಮತ್ತು ಅವರ ಸಂಬಂಧ?

**ಮುಕುಂದ**—ತಿಳಿದಿದ್ದರೆ ಕೇಳುವೆನೆ?

**ಪ್ರಭಾಕರ**—ನನ್ನ ತಾಯಿಯ ಮಾವನ ಮಗಳಂತೆ ಅವರು. ಅವರ ತಂದೆಯು ಮಂಗಳೂರಲ್ಲಿ ಡಿಸ್ಟ್ರಿಕ್ಟ್ ಕೋರ್ಟಿನ 'ಕ್ಲಾರ್ಕ'ರಾಗಿದ್ದಾಗ ನೀವಲ್ಲಿಯೇ ಇದ್ದು ಕಲಿತುದಂತೆ. ತಾಯಿಗೆ ಅವರಂದರೆ ಬಹಳ ಪ್ರೇಮವಂತೆ.

**ಮುಕುಂದ**—ಯಾಕೆಲ್ಲ ಈ ಹಳೆಯ ಪುರಾಣ ನಿನಗೆ? ಹಾಗೆಲ್ಲಾ ನೋಡ ಹೋದರೆ ಎಲ್ಲರಿಗೂ ಒಂದಲ್ಲೊಂದು ಸಂಬಂಧ ಇದ್ದೇ ಇದೆ.

**ಪ್ರಭಾಕರ**—ಅವರ ಗಂಡ ತಹಸಿಲ್ದಾರ ರಾಮರಾಯರು ಅಕಸ್ಮಾತ್ತಾಗಿ ತೀರಿಹೋಗುವ ಮೊದಲು ನೀವೂ ಒಂದೆರಡು ಸಲ ಅವರ ಮನೆಗೆ ಹೋಗಿದ್ದಿ ರಂತೆ. ನಿಮಗೂ ಅವರಿಗೂ ಸ್ನೇಹಾಚಾರವಿದ್ದಿತಂತೆ.

**ಮುಕುಂದ**—ನಾನು ಮಂಗಳೂರಲ್ಲಿ ಹಲವು ಮನೆಗಳಿಗೆ ಹೋಗಿದ್ದೆ. ಅನೇಕರ ಸ್ನೇಹವಿದ್ದಿತು ನನಗೆ. ಅವರಿಂದೇನಾಯಿತಂತೆ?

**ಪ್ರಭಾಕರ**—ಆಗುವದೇನು? ಈಗ ಗಂಡ ಸತ್ತು ಅವರಿಗೆ ಸ್ವಲ್ಪ ಬಡತನ ಬಂದಿದೆ, ಅಷ್ಟೆ.

**ಮುಕುಂದ**—ಸಾಕು, ಸಾಕು ನಿನ್ನ ಮಾತೆಲ್ಲ! ನೀನಿನ್ನು ಆ ತುಳಸಿಯ ಮನೆಗೆ ಕಾಲಿಡಬಾರದು.

**ಪ್ರಭಾಕರ**—ಅವರು ತಾಯಿಯಂತೆ ನನ್ನನ್ನು ಪ್ರೀತಿಸುವಾಗ ನಾನು ಹೋಗದಿರುವುದಾದರೂ ಹೇಗೆ?

**ಮುಕುಂದ**—ಹೌದು! ಅವಳು ತಾಯಿಯಂತೆ ನಿನ್ನನ್ನು ಪ್ರೀತಿಸಿ ಮರುಳು ಮಾಡಿರುವಳೆಂಬುದನ್ನು ಬಲ್ಲೆ ನಾನು. ನಿನ್ನನ್ನವಳ ಮನೆಯಲ್ಲಿ ಇರ ಬಿಟ್ಟುದೇ ದೊಡ್ಡ ತಪ್ಪು ನನ್ನದು.

**ಪ್ರಭಾಕರ**—ಏನಾಯಿತೀಗ ಅದರಿಂದ?

**ಮುಕುಂದ**—ಪ್ರಾಯಕ್ಕೆ ಬಂದ ಹುಡುಗಿಯರಿರುವಲ್ಲಿ ಪ್ರಾಯದ ಹುಡುಗ ರನ್ನಿರಗೊಡಿಸಲೇ ಬಾರದು.

**ಪ್ರಭಾಕರ**—ಆದರೆ ತುಳಸಿಬಾಯಿಯವರು ಪ್ರಾಯಸಂದವರಲ್ಲವೇ?

**ಮುಕುಂದ**—ಅವಳಿಗೊಬ್ಬಳು ಪ್ರಾಯಕ್ಕೆ ಬಂದ ಹುಡುಗಿಯಿಲ್ಲವೇ?

**ಪ್ರಭಾಕರ**—ಪ್ರಾಯದ ಹುಡುಗಿಯಿದ್ದರೆ ಪ್ರಾಯಬಂದ ಹುಡುಗನಿಗೆ ಮದುವೆ ಮಾಡಿಸಲಾಯಿತು (ನಸುನಗೆ ಬೀರುವನು)

**ಮುಕುಂದ**—(**ಜಗ್ಗನೆ ಆರಾಮ ಕುರ್ಚಿಯಿಂದೆದ್ದು**) ಏನು ಏನಂದೆ? ಮದುವೆ ಮಾಡಿದರಾಯಿತೆ? ಯಾರಿಗೆ ಯಾರನ್ನು ಮದುವೆ ಮಾಡುವುದು? ಆ ಬಡ ತುಳಸಿಯ ಹುಡುಗಿಯನ್ನು ನಿನಗೆ ಮದುವೆ ಮಾಡುವುದೇ? ಅದಕ್ಕೋ ನಾನೀಗ ನಿನಗೆ ಸಹಸ್ರ ರೂಪಾಯಿ ವ್ಯಯಿಸಿ B. A., B. L. ಕಲಿಸಿದ್ದು?

**ಪ್ರಭಾಕರ**—ಯಾಕಾಗದು? ಗಂಡ ಸತ್ತು ಕಷ್ಟಕ್ಕೀಡಾಗಿರುವ ತುಳಸೀ ಬಾಯಿಯವರಿಗೆ ನಾವೇಕೆ ಸಹಾಯ ಮಾಡಬಾರದು? ಬಹಳ ಒಳ್ಳೆಯವರವರು. ಅವರ ಮಗಳು........

**ಮುಕುಂದ**—(**ಕೋಪೋದ್ರೇಕದಿಂದ**) ಸಾಕು ಮಾಡು! ತಾಯಿಯ ಗುಣ ವರ್ಣನೆಯೇ ಸಾಕು! ಇನ್ನು ಮಗಳ ಗುಣಗಾನ ಬೇಡ. ವಿಚಾರಹೀನ ತರುಣನನ್ನು ಮಗಳ ಮೂಲಕ ಮರುಳುಮಾಡಿ ತನ್ನ ಬಲೆಯೊಳಗೆಳೆವ ಆ ಮಾನಹೀನ ತುಳಸಿಬಾಯಿ........

**ಪ್ರಭಾಕರ**—(**ಉದ್ವೇಗಗೊಂಡು**) ಅಪ್ಪಾ! ನನ್ನನ್ನು ಎಷ್ಟು ಬೇಕಾದರೂ ಬೈಯಿರಿ. ಆದರೆ .......

**ಮುಕುಂದ**—ಆದರೆ ಗೀದರೆ! ನನ್ನೆದಿರಲ್ಲಿ ಅವಳ ಮಾತೆತ್ತಿದರೆ ಜಾಗ್ರತೆ! (**ಕೈಗಳೆರಡನ್ನೂ ಬೆನ್ನ ಹಿಂದೆ ಕಟ್ಟಿಕೊಂಡು ಪೋರ್ಟಿಕೋದ ಹಿಂಭಾಗಕ್ಕೆ ಸರಿದು ಅತ್ತಿತ್ತ ಚಲಿಸುವನು. ಪ್ರಭಾಕರನು ಕ್ರುದ್ಧ ದೃಷ್ಟಿಯನ್ನೊಮ್ಮೆ ತಂದೆಯ ಕಡೆಗೆ ಬೀರಿ ಹೃದಯ ಬಿರಿವಂತೆ ಏರಿಬರುವ ಉದ್ವೇಗವನ್ನು ತಡೆದಿಟ್ಟುಕೊಂಡು ತುಸು ಹೊತ್ತು ಚಿತ್ರದ ಗೊಂಬೆಯಂತೆ ನಿಂತುಬಿಡುವನು.**)

**ಪ್ರಭಾಕರ**—(**ದೀರ್ಘ ಶ್ವಾಸಬಿಟ್ಟು**) ಅಪ್ಪಾ ನಾನು ಹೋಗಿಬರುತ್ತೇನೆ. ಟ್ರೈನಿಗೆ ಸಮಯವಾಯಿತು. (**ಹೊರಡುವನು**)

**ಮುಕುಂದ**—(**ಸಮಾಧಾನ ತಳೆದು**) ಪ್ರಭಾಕರ, ನಿಲ್ಲು ನಿಲ್ಲು. ನಾನು ಹೇಳುವುದನ್ನೆಲ್ಲಾ ಕೇಳಿ ಮತ್ತೆಲ್ಲಿ ಬೇಕಾದರೂ ಹೋಗು.

**ಪ್ರಭಾಕರ**—(**ರೋಷದಿಂದ**) ಏನು, ಇನ್ನೂ ಹೇಳುವುದಿದೆಯೇ? ಆಗಲಿ ಹೇಳುವುದನ್ನೆಲ್ಲಾ ಹೇಳಿಬಿಡಿ!

**ಮುಕುಂದ**—ಅದೇಕಷ್ಟು ಸಿಟ್ಟು? ಬಾ ಇತ್ತ ಬಾ. (**ಸಮೀಪಕ್ಕೆಳೆದು ಭುಜದ ಮೇಲೆ ಕೈಯಾಡಿಸಿ**) ಕುಳಿತುಕೋ. (**ಕೈ ಹಿಡಿದು ಕರದೊಯ್ದು ಆರಾಮ ಕುರ್ಚಿಯಲ್ಲಿ ಕುಳಿತು ಪ್ರಭಾಕರನನ್ನು ಹತ್ತಿರದ ಕುರ್ಚಿಯಲ್ಲಿ ಕೂತುಕೊಳ್ಳ ಹೇಳುವನು. ಪ್ರಭಾಕರನು ಕೂತುಕೊಳ್ಳದೆ ಕುರ್ಚಿಯ ಹಿಂಭಾಗ ಹಿಡಿದು ನಿಲ್ಲುವನು.**)

**ಮುಕುಂದ**—ಪ್ರಭಾಕರ, ನಿನಗೆ ಎಂತೆಂತಹ ನೆಂಟಸ್ತಿಕೆಗಳು ಬಂದರೂ ನಾನವಕ್ಕೆಲ್ಲಾ ಗಣ್ಯಮಾಡದೆ, ನಿನ್ನ ವಿದ್ಯೆ ಪೂರ್ಣ ಮುಗಿಯದೆ ಮದುವೆ ಮಾಡಲಾರೆನೆಂಬ ದೃಢನಿರ್ಧಾರದಿಂದಿದ್ದೆ.

**ಪ್ರಭಾಕರ**—ಅದಕ್ಕಾಗಿಯೇ ನಾನೂ ಈ ವರೆಗೆ ಕಾದಿದ್ದುದು. ಈಗ ಮುಗಿಯಿತಲ್ಲ ವಿದ್ಯೆ? ಇನ್ನೇನಾದರೂ ಮದುವೆಗೆ ನಿಮ್ಮ ಅಡ್ಡಿಯಿರಲಾರದಲ್ಲ?

**ಮುಕುಂದ**—ಅಂದರೆ?

**ಪ್ರಭಾಕರ**—ನಾನೀಗ ನನ್ನ ಅಂತರ್ಯವನ್ನು ಸ್ಪಷ್ಟವಾಗಿ ನಿಮಗೆ ತಿಳಿಸಬೇಕಾಗಿದೆ. ನಾನು ಬಿ. ಎ. ಕಲಿಯುವಾಗಲೆ ತುಳಸಿಬಾಯಿಯವರ ಪುತ್ರಿ ಸುಧೆಯಲ್ಲಿ ಅನುರಕ್ತನಾಗಿದ್ದೆನು. ಅವಳನ್ನೇ ವಿವಾಹ ಮಾಡಿಕೊಳ್ಳುವ ನಿರ್ಧಾರ ಕೂಡಾ ಮಾಡಿರುವೆನು. ನನ್ನ ವಿದ್ಯೆ ಮುಗಿಯಬೇಕು; ಆಮೇಲೆ ನಿಮಗದನ್ನು ತಿಳಿಸಿ ನಿಮ್ಮ ಸಮ್ಮತಿ ಪಡೆಯಬೇಕು ಎಂದಿದ್ದೆ.

**ಮುಕುಂದ**—ನನಗೆ ತಿಳಿಯದಿದ್ದರಲ್ಲವೇ ನೀನು ತಿಳಿಸುವುದು! ಅದಂತಿರಲಿ, ನಿನ್ನ ವಿದ್ಯೆ ಇಲ್ಲಿಗೆ ಸಂಪೂರ್ಣವಾಯಿತೆಂದು ಹೇಗೆ ಗೊತ್ತು ನಿನಗೆ?

**ಪ್ರಭಾಕರ**—ಮತ್ತಿನ್ನೇನು ಕಲಿಯಲಿದೆ?

**ಮುಕುಂದ**—ಮತ್ತೇನೂ ಕಲಿಯಲಿಕ್ಕಿಲ್ಲವೇ? ನಿನಗೆ ಇಷ್ಟೇ ಗೊತ್ತೇ?

**ಪ್ರಭಾಕರ**—ಏನಿದೆ ಹೇಳಬಾರದೆ?

**ಮುಕುಂದ**—ಬಾರ್-ಎಟ್-ಲೋ ಕಲಿಯಲಿಕ್ಕಿಲ್ಲವೇ?

**ಪ್ರಭಾಕರ**—(**ಒಮ್ಮೆಯೇ ಉಲ್ಲಾಸಗೊಂಡು ಮುಂದೆ ಬಂದು ಮುಕುಂದರಾಯರ ಒರಗುವ ಕುರ್ಚಿಯ ಹಿಂಬದಿಯ ಎಡಭಾಗವನ್ನು ಹಿಡಿದು ನಿಂತು ಪ್ರೀತಿಪೂರ್ವಕವಾಗಿ**) ಅಪ್ಪಾ, ನನ್ನನ್ನು ಇಂಗ್ಲೆಂಡಿಗೆ ಕಳುಹಿಸುವಿರೇ? ನಿಜವೇ? ಈ ವರೆಗೆ ಆ ಕುರಿತು ಒಂದು ಮಾತು ಕೂಡಾ ಹೇಳಿಲ್ಲವಲ್ಲ?

**ಮುಕುಂದ**—ಹೇಳುವ ಅಗತ್ಯವೇನಿತ್ತು? ಕಾರ್ಯಜಾಣರ ಕಾರ್ಯವೇ ಮಾತು.

**ಪ್ರಭಾಕರ**—ಏನು, ನೀವೀಗ ಎಲ್ಲವನ್ನೂ ನಿಶ್ಚೈಸಿಬಿಟ್ಟಿರುವಿರೇ?

**ಮುಕುಂದ**—ನಿಶ್ಚೈಸುವುದು ಮಾತ್ರವಲ್ಲ, ಸಿದ್ಧತೆ ಕೂಡಾ ಮಾಡಿರುವೆನು.

**ಪ್ರಭಾಕರ**—ಯಾವುದಕ್ಕಾಗಿ?

**ಮುಕುಂದ**—ನಿನ್ನ ಇಂಗ್ಲೆಂಡಿನ ಪ್ರಯಾಣಕ್ಕಾಗಿ.

**ಪ್ರಭಾಕರ** — ಏನು ಮಾಡಿರುವಿರಿ?

**ಮುಕುಂದ**—ಬೊಂಬಾಯಿಯ ನನ್ನ ಮಿತ್ರ ರಾಮರಾಯರಿಗೆ ಕಾಗದ ಬರೆದು 'ಪಿ. ಎಂಡ್ ಒ.' ಸ್ಟೀಮರ್ ಕಂಪೆನಿಯಲ್ಲಿ 'ಪೆಸೆಜ್ ಬುಕ್'ಮಾಡ ಹೇಳಿರುವೆನು. ಈ ವರೆಗೆ ಅವರ ಉತ್ತರ ಬಂದಿಲ್ಲ. ಉತ್ತರ ಬಂದೊಡನೆಯೇ ನೀನು ಹೊರಟು ಹೋಗಬೇಕು.

**ಪ್ರಭಾಕರ**—ಇನ್ನೊಂದು ತಿಂಗಳ ಅವಕಾಶವೂ ಇಲ್ಲವೆ?

**ಮುಕುಂದ**—ಇಲ್ಲ. ರಾಮರಾಯರ ಕಾಗದ ಬಂದೊಡನೆ ನೀನು ಬೊಂಬಾಯಿಗೆ ಹೋಗಿ ಅಲ್ಲಿ ಒಂದು ವಾರ ಉಳಿದು ನಿನಗೆ ಬೇಕಾದ ಉಡುಗೆ ತೊಡಿಗೆಗಳನ್ನೆಲ್ಲಾ ತಯಾರಿಸಿಕೊಳ್ಳಬೇಕು.

**ಪ್ರಭಾಕರ**—(**ವಾಚ್ ನೋಡಿ**) ಆಯ್ತು ಅಪ್ಪಾ, ನಿಮ್ಮಿಚ್ಛೆಯಿದ್ದಂತಾಗಲಿ. ಟ್ರೈನು ಬರುವ ಸಮಯವಾಯಿತು. ನಾನು ಇಂಗ್ಲೆಂಡಿಗೆ ಹೋಗುವ ಸಂತೋಷ ಸಮಾಚಾರವನ್ನು ಮಂಗಳೂರಿನ ನನ್ನ ಮಿತ್ರರಿಗೆ ತಿಳಿಸಿ ನಾಳೆ ಮುಂಜಾನೆ ಹಿಂದೆ ಬರುವೆನು. ಹೋಗುವೆನು. (**ಆನಂದಾತಿಶಯದಿಂದ ಹೋಗುವನು**)

---

## ೨ನೇ ದೃಶ್ಯ—ಬೀದಿ

[**ಮುಕುಂದರಾಯರು ಯೋಚನಾಮಗ್ನರಾಗಿ ಪ್ರವೇಶಿಸಿ ಆಮೇಲೆ ನಸುನಗುತ್ತಾ**]

**ಮುಕುಂದ**—ಹುಂ, ಅಡ್ಡ ದಾರಿ ಹಿಡಿದ ಹುಡುಗನ ಬುದ್ಧಿಯನ್ನು ಉಪಾಯದಿಂದಲೇ ಹಾದಿಗೆ ತರಬೇಕು. ಇಂಗ್ಲೆಂಡಿನ ಹೆಸರು ಕೇಳಿದಾಕ್ಷಣವೇ ಎಲ್ಲವನ್ನೂ ಮರೆತು, ಸುಪ್ರಸನ್ನನಾದ ಪ್ರಭಾಕರನು, ಇಂಗ್ಲೆಂಡಿಗೆ ಹೋದ ನಂತರ ಈ ಬಡ ತುಳಸಿಯ ಮುಖವನ್ನು ಕನಸಿನಲ್ಲಾದರೂ ನೆನಸುವನೇ? ನೂರು ವರ್ಷ ತಪಸ್ಸು ಮಾಡಿದರೂ ಸಿಗದಂತಹ ಹುಡುಗನೊಬ್ಬನನ್ನು ಅನಾಯಾಸವಾಗಿ ಬಗಲೊಳಗೆ ಹಾಕಿಬಿಟ್ಟೆನೆಂದು ಮನಸ್ಸಿನ ಮಂಡಿಗೆ ತಿಂದು ಕೊಂಡಿರಬಹುದೀಗ ತುಳಸಿ—ನಗೆ ನಾಚಿಕೆಯಿಲ್ಲದವಳು! ಅವಳಿಗೆ ತಕ್ಕ ಪ್ರತೀಕಾರವನ್ನು ಮಾಡದಿದ್ದರೆ ನಾನು ಮುಕುಂದರಾಯನಲ್ಲ. (**ಪುನಃಯೋಚಿಸಿ**) ಹುಂ, ಮನುಷ್ಯ ಪ್ರಕೃತಿಯ ವಿಪರೀತ ವ್ಯಾಪಾರ! ನಾವು ಚಿಕ್ಕಂದಿನಿಂದಲೂ ಅಕ್ಕರೆ

ಯಿಂದ ಸಲಹಿ ವಿದ್ಯೆ ಬುದ್ಧಿ ಕಲಿಸಿ ಹುಡುಗರನ್ನು ಬೆಳೆಸುವ್ರು. ಅವರ ಕುರಿತು ನಾನಾ ತಿರುಕ*ಸ್ವಪ್ನಗಳನ್ನು ಕಟ್ಟಿಕೊಂಡಿರುವ್ರು. ಅವರು, ಒಂದೆರಡು ದಿನಗಳ ಪ್ರೇಮಸಂಪರ್ಕ ಮಾತ್ರದಿಂದ, ಸಂಪರ್ಕವೇಕೆ, ಕ್ಷಣ ಮಾತ್ರದ ನೋಟಗಳ ಮಿಲನದಿಂದ ಸಂಪೂರ್ಣವಾಗಿ ತರುಣಿಯರ ಅಧೀನ ರಾಗಿ, ತಂದೆ ತಾಯಿಗಳನ್ನೂ ಧಿಕ್ಕರಿಸಿ ದೂರೀಕರಿಸುವುದಕ್ಕೂ ಹಿಂಜರಿಯ ದಿರುವುದು. ಆಹ! ಅದೆಷ್ಟು ಸಂತಪ್ತವಾಗಬೇಕಾ ಪಿತೃಮಾತೃ ಹೃದಯ! ನಾನೀಗ ಪ್ರಭಾಕರನನ್ನು ಇಂಗ್ಲೆಂಡಿಗೆ ಕಳುಹಿಸುವ ಉಪಾಯ ಹೂಡದಿದ್ದರೆ, ಆ ಬಿಕ್ನಾಸಿ ತುಳಸೀ ಮಗಳಿಗಾಗಿ ನಾವು ಜಗಳಾಡಿಕೊಳ್ಳಬೇಕಿತ್ತು. ಪರಿಣಾಮವೇನಾಗುತ್ತಿತ್ತೋ! ಅದಂತಿರಲಿ. ನಾನೀಗಲೇ ರಾಮರಾಯನಿಗೆ 'ಪೆಸೆಜ್ ಬುಕ್' ಮಾಡಲು ಕಾಗದ ಬರಿಯಬೇಕು. ಬೇಗನೆ ಪ್ರಭಾಕರನನ್ನು ಬೊಂಬಾಯಿಗೆ ಕಳುಹಿಸುವಂತೆ ನೋಡಬೇಕು. ಬೊಂಬಾಯಿಯಲ್ಲಿ ಬೇಕಾದರೆ ಅವನು ಒಂದು ತಿಂಗಳಿರಲಿ.

---

# ೩ನೇ ದೃಶ್ಯ—ಮನೆ

[ಸುಮಾರು ೧೧ ಘಂಟೆ ರಾತ್ರಿ. ಮಂಗಳೂರಿನ ಕದ್ರಿಯಲ್ಲಿಯ, ಚಿಕ್ಕದಾದರೂ ಚೊಕ್ಕ ಮನೆಯ ಪಡುಬದಿಯ ಕೋಣೆಯಲ್ಲಿ ತುಳಸಿಬಾಯಿಯ ಸುಮಾರು ೧೫—೧೬ ವರ್ಷದ ಪುತ್ರಿ ಸುಧೆಯು ಕುರ್ಚಿಯ ಮೇಲೆ ಕುಳಿತು ಮೇಜಿನ ಮೇಲಿನ ಎರಡು ಮೂರು ಪುಸ್ತಕಗಳನ್ನು ತೆರೆತೆರೆದು ನೋಡಿ ಓದಲಾಗದೆ ಬಿಸಾಡುವಳು. ಆ ಮೇಲೆ ತೀವ್ರ ಅಸಹಿಷ್ಣುತೆಯಿಂದ ಎದ್ದು, ದೊಡ್ಡದಾದ ಕಿಟಿಕಿಯ ಕಬ್ಬಿಣದ ಸರಳುಗಳ ನಡುವೆ ಮುಖವಿಟ್ಟು ಹೊರಗೆ ಬಲುದೂರ ದೃಷ್ಟಿ ಹರಿಸಿ ನೋಡುತ್ತಾ ತುಸು ಹೊತ್ತು ನಿಲ್ಲುವಳು. ಕಡೆಗಣ್ಣಲ್ಲಿ ತುಂಬಿ ಬರುವ ನೀರನ್ನು ಸೆರಗಿನ ತುದಿಯಿಂದೊರಸಿ ನಿಟ್ಟು ಸಿರಿಟ್ಟು ಪುನಃ ಕುರ್ಚಿಯಲ್ಲಿ ಕುಳಿತು ಗಾಢಚಿಂತಾಮಗ್ನಳಾಗುವಳು. ಕಣ್ಣೀರು ಬಿಂದು ಬಿಂದುವಾಗಿ ಹರಿಯುತ್ತಿರುವುದು. ಆಗ ಪ್ರಭಾಕರನು ಮೆಲ್ಲಗೆ ಬಾಗಿಲು ದೂಡಿ ಕಳ್ಳ ಹೆಜ್ಜೆಗಳಿಂದ ಕೋಣೆಯೊಳಗೆ ಪ್ರವೇಶಿಸಿ ಸುಧೆಯ ಕುರ್ಚಿಯ ಹಿಂಭಾಗ ದಲ್ಲಿ ತುಸುಹೊತ್ತು ಚಿತ್ರದ ಗೊಂಬೆಯಂತೆ ನಿಲ್ಲುವನು ಆ ಮೇಲೆ ಶರ್ಟಿನ ಕಿಸೆ ಯಿಂದ ಕರವಸ್ತ್ರ ತೆಗೆದು ಮುಖದಿಂದ ಜಾರಿಬೀಳುವ ಕಣ್ಣೀರ ಬಿಂದುಗಳಿಗೆ ಅಡ್ಡವಾಗಿ ಹಿಡಿಯುವನು ಸುಧೆಯು ಥಟ್ಟನೆ ಕುರ್ಚಿಯಿಂದೆದ್ದು ನಿಲ್ಲುವಳು ]

**ಸುಧಾ**—ಯಾರು! ನೀವೇ? (ಚಕಿತ ವದನದಲ್ಲಿ ಫಕ್ಕನೆ ಸ್ತ್ರೀಸಹಜ ಮಂದ ಹಾಸವನ್ನು ಮಿಂಚಿಸಿ ಸೆರಗಿಂದ ಅತ್ಯವಸರದಿಂದ ಮುಖ, ಕಣ್ಣುಗಳನ್ನೊರಸಿ ಕೊಳ್ಳುವಳು.)

**ಪ್ರಭಾಕರ**—ಹೌದು. (ತಳಮಳದ ತೆರೆಗಳ ತರ್ಜನೆಯಲ್ಲಿ ಬಹಳ ಪ್ರಯತ್ನ ದಿಂದೆಂಬಂತೆ ಒಂದಿಷ್ಟು ನಗೆಯ ಚಿಳ್ಳೊರೆ ಸೂಸುವನು.)

**ಸುಧಾ**—(ಭೀತ ಹುಲ್ಲೆಯಂತೆ ಚಂಚಲಾಕ್ಷಿಗಳನ್ನು ದಿಕ್ಕು ಗುರಿಯಿಲ್ಲದೆ ಸಿಕ್ಕಿ ಧತ್ತ ಹರಿಸಿ ಗೊಂದಲದಿಂದ) ಅದೇಕೆ ಪುನಃ ಬಂದಿರಿ? ನಾನು ಬಾಗಿಲುಹಾಕಿರ ಲಿಲ್ಲವೇ?

**ಪ್ರಭಾಕರ**—(ಪುನಃ ಅದೇ ಕೃತಕ ನಗೆಬೀರಿ ಕ್ಷಮಾಯಾಚನೆಯ ದೀನ ದೃಷ್ಟಿ ಗಳನ್ನು ಸುಧೆಯ ಕಡೆಗೆ ಬೀರಿ) ಇಲ್ಲ ಸುಧಾ! ನಾನು ಬಂದುದು ತಪ್ಪಾಯಿತೆ?

**ಸುಧಾ**—(ಉತ್ತರವೇನು ಕೊಡುವುದೆಂದು ತೋಚದೆ ಅಪ್ರತಿಭಳಾಗಿ ಆ ಮೇಲೆ ಫಕ್ಕನೆ ಬಾಗಿಲ ಕಡೆನೋಡಿ) ಒಹೋ, ಅಮ್ಮ ಮತ್ತು ನೀವು ಹೋದ ಮೇಲೆ ನಾನೇನೋ ಯೋಚನಾಮಗ್ನಳಾಗಿ ಬಾಗಿಲು ಹಾಕಲು ಮರತೇ ಬಿಟ್ಟೆ. ನೀವೇಕೆ ಬಂದುದು ಪುನಃ? ಘಂಟೆ ೧೧ ದಾಟಿರಬೇಕು. ಹೋಗಿರಿ, ಮಲಗಿರಿ.

**ಪ್ರಭಾಕರ**—ಆಯ್ತು ಹೋಗುವೆನು. ಸುಧೆಯ ಹೃದಯ ಮಥನದಿಂದ ಹೊರ ಸೂಸಿದ ಸುಧಾ ಬಿಂದುಗಳನ್ನು ಪಡೆವ ಸುದೈವಿಯಾದ ಈ ಕರವಸ್ತ್ರ ವನ್ನು ಕಣ್ಣಿಗೊತ್ತಿಟ್ಟು ಮಲಗಿದರಾದರೂ ನಿದ್ದೆ ಬರುವುದೋ ನೋಡುವೆನು.

**ಸುಧಾ**—ಸಾಕು ಮಾಡಬಹುದು ನಿಮ್ಮ ಕವಿತಾಶಕ್ತಿಯ ಪ್ರದರ್ಶನವನ್ನು

**ಪ್ರಭಾಕರ**—ನನ್ನಲ್ಲಿ ಕವಿತಾಶಕ್ತಿಯೇ? ನನ್ನೀ ಒಣ ಹೃದಯದಲ್ಲಿ ಆ ಶಕ್ತಿಯ ಒಂದೇ ಒಂದು ಉಸುರಿನ ಸುಳಿವಾದರೂ ಇದ್ದರೆ, ಗರುಡ ಪಕ್ಷಿಯಂತೆ ನಿನ್ನನ್ನು ಬೆನ್ನಲ್ಲಿ ಹೊತ್ತು ಪಕ್ಕಬಡಿದು ಮೇಲಕ್ಕೇರಿ, ನಿನ್ನ ದಿವ್ಯಪ್ರೇಮದ ಪ್ರಿಯ ಕಲ್ಪನಾ ಸಾಮ್ರಾಜ್ಯದಲ್ಲಿ ವಿಹರಿಸುತ್ತಾ ಕೋಣೆಯಲ್ಲೀ ಕುಳಿತು ಜಾಮವನ್ನಾದರೂ ಕ್ಷಣದಂತೆ ಕಳೆಯದೆ ಇಲ್ಲಿಗೆ ಬರುತ್ತಿದ್ದೆನೇ?

**ಸುಧಾ**—(ಆರಂಭದ ಕ್ಷೋಭೆಯೆಲ್ಲಾ ತೊಲಗಿ ಪ್ರಸನ್ನ ಪ್ರೇಮಾವರಿತಳಾಗಿ ನಸುನಗೆ ಬೀರಿ) ಕವಿಯಲ್ಲವಂತೆ! ಹಾಗಾದರೆ ಈ ಉತ್ಪ್ರೇಕ್ಷೆಯ ವಿಲಕ್ಷಣತೆ ಬಿಟ್ಟು ಸಾಮಾನ್ಯವಾಗಿ ಮಾತಾಡಬಾರದೇ?

**ಪ್ರಭಾಕರ**—(ಸುಧೆಯ ಪ್ರಸನ್ನತೆಯ ತಣ್ಣೀರ ಸೇಚನದಿಂದ ತಳಮಳದ ಕುದಿ ಆರಿ ತಣ್ಣಗಾಗಿ) ಪ್ರಿಯೆ, ತುಳಸಿಯಮ್ಮನು ನಮ್ಮಿಬ್ಬರನ್ನು ಅಷ್ಟು ಬೇಗ ಅಗಲಿಸುವರೆಂದು ನಾನೆಣಿಸಲಿಲ್ಲ. ೯|| ಘಂಟೆಯಾದಾಗ ಅವರು, "ಮಲಗುವ ಹೊತ್ತಾಯಿತು; ಪ್ರಭಾಕರ, ಹೋಗು ಮಲಗು. ಸುಧೆಯೂ ಮಲಗಲಿ" ಎಂದೊಡನೆಯೇ ನನ್ನ ಮೇಲೆ ಒಮ್ಮೆಯೇ ತಣ್ಣೀರೆರೆದಂತಾಯಿತು. ಅವರು ಎದ್ದು ಹೊರ ಹೋದಾಗ ನಾನೂ ನಿರ್ವಾಹವಿಲ್ಲದೆ, ಆನೆಗಾಲವನಂತೆ ಕಾಲುಗಳನ್ನೆಳಕೊಂಡು ಹೊರಹೋಗಿ ನೆಟ್ಟಗೆ ಕೋಣೆಗೆ ನಡೆದು ಚಿತ್ರದ ಗೊಂಬೆಯಂತೆ ಮಂಚದ ಮೇಲೆ ಬಿದ್ದುಬಿಟ್ಟೆನು. ಸುಮಾರು ೧ ಘಂಟೆ ಸಮಯವನ್ನು ಹಾಸಿಗೆಯಲ್ಲಿ ಅತ್ತಿತ್ತ ಹೊರಳಾಡುತ್ತಾ ಕಳೆದೆನು. ಎಷ್ಟು ಪ್ರಯತ್ನಿಸಿದರೂ ನಿದ್ದೆಯೇ ಹತ್ತದು. ಕಣ್ಣು ತೆರೆದರೂ, ಮುಚ್ಚಿದರೂ ಎಲ್ಲೆಲ್ಲಿಯೂ ನಿನ್ನ ಮನೋಹರ ಚಿತ್ರವೇ ಮುಂದೆ ಬಂದು ನಿಲ್ಲುವುದು. ಒಳಗಿಂದೊಳಗೆ ಉತ್ತೇಜಿಸಿ ಕ್ಷೋಭೆಗೊಳಿಸುವ ಅದಾವುದೋ ವಿಚಿತ್ರ ದ್ರಾವಕವನ್ನು ಮೈಗೆ ಚಿಮುಕಿಸಿ ಬಿಟ್ಟಂತಾಯಿತು. ಮಲಗಲಾರದೆ ಎದ್ದು ಕೂತೆನು. ಅದೂ ಅಸಹನೀಯವಾಗಿ ಕೋಣೆಯ ಬಾಗಿಲು ತೆರೆದು ಹೊರಬಂದು ಸುತ್ತಲೂ ನೋಡುತ್ತಾ ನಿಂತೆನು. ಹಿಟ್ಟು ಚೆಲ್ಲಿದಂತೆ ಹಬ್ಬಿರುವ ಬೆಳ್ದಿಂಗಳು, ಕಡು ಪಚ್ಚೆ ಸೀರೆಯ ಬೆಡಗಿಂದ, ಲಜ್ಜೆಯ ಮೌನದಿಂದ, ಪ್ರಣಯಸಮ್ಮಿಲನಕ್ಕಾಗಿ ಹಾತೊರೆದು ನಿಂತಿರುವ ತರುಲತೆಗಳೆಂಬ ಲಲನೆಯರಿಗೊಲಿದು, ಚುಂಬಿಸಿ ಚುಂಬಿಸಿ ನಲಿವ ವಿಟನಂತೆ ಭಾಸವಾಗುತ್ತಿತ್ತು. ಪ್ರಣಯದ ಬೇಗೆಯಿಂದ, ಅದೆಲ್ಲಿಗೋ ಅಗಲಿ ಹೋಗಿರುವ ಇನಿಯರ ಬಳಿಗೆ ಬೇಗ ಬೇಗನೆ ಸರಿವ, ಲಜ್ಜೆಯ ಬಿಳಿ ಮುಸುಕಿನ ಪ್ರಣಯಿನಿಯರಂತೆ ತೋರುವ ಹತ್ತಿರಾಶಿ ಮೋಡಗಳು ಆಕಾಶದಲ್ಲಿ ತೇಲಿ ಹೋಗುತ್ತಿದ್ದುವು. ವೈಶಾಖದ ಕಡು ನೀಲ ಆಕಾಶವು ಗಂಭೀರ ಮನೋಜ್ಞತೆಯಿಂದ ಶೋಭಿಸುತ್ತಿತ್ತು. ಶುಕ್ಲಪಕ್ಷದ ಸುಧಾಂಶುವು ಮಂದಹಾಸ ಬೀರುತ್ತೇರುತ್ತಿದ್ದನು. ಆ ಸುಧಾಂಶುವಿನ ಮನೋಹರ ಬಿಂಬದಲ್ಲಿ, ಸುಧಾ, ನಿನ್ನ ಪ್ರತಿಬಿಂಬವನ್ನೇ ಕಂಡು, ಉನ್ಮತ್ತನಂತೆ ಅದನ್ನೇ ಕಣ್ಣುಕಣ್ಣು ನೋಡಹತ್ತಿದೆನು. ಏನೇನೋ ಎಣಿಸಿ ವಿಲಕ್ಷಣವಾಗಿ ನಕ್ಕೆನು.

**ಸುಧಾ**—(ವಿಸ್ಮಯಗೊಂಡು) ಪ್ರಿಯ, ಇದೇನು? ಏನೆಲ್ಲಾ ಹೇಳುತ್ತಿರುವಿರಿ? ಹೋಗಿರಿ, ಶಾಂತಚಿತ್ತದಿಂದ ಮಲಗಿರಿ.

**ಪ್ರಭಾಕರ**—ಪ್ರಿಯೆ, ಮಲಗಲಾಗುತ್ತಿದ್ದರೆ ನಾನಿಲ್ಲಿ ಬರುತ್ತಿದ್ದನೇ? ಚಂದ್ರನನ್ನೇ ನೋಡುತ್ತಿದ್ದ ನಾನು ನಿನ್ನ ಕೋಣೆಯ ಕಡೆ ದೃಷ್ಟಿ ಹರಿಸಿದಾಗ ಬಾಗಿಲೆಡೆಯಿಂದ ದೀಪದ ಬೆಳಕು ಹೊರ ಬಿದ್ದು, ದೀಪಸ್ತಂಭದ ಸಂಕೇತದ ಬೆಳಕಿನಂತೆ ಮನಸ್ಸನ್ನೊಮ್ಮೆಯೆ ನಿನ್ನ ಬಳಿಗೆಳೆಯಿತು. ನೀನೂ ಮಲಗಿಲ್ಲೆಂದು ಬಾಗಿಲ ಸಮೀಪ ಬಂದು ಮೆಲ್ಲಗೆ ಬಾಗಿಲು ದೂಡಿ ಒಳ ಬಂದೆನು. ಸುಧಾ, ನೀನು ಬಾಗಿಲು ಕೂಡಾ ಹಾಕದೆ, ಒಬ್ಬಳೇ ಕುರ್ಚಿಯಲ್ಲಿ ಕುಳಿತು ಅದಾವ ಚಿಂತಾಮಗ್ನಳಾಗಿದ್ದೆ? ಅದೇಕೆ ಬೊಟ್ಟುಬೊಟ್ಟಾಗಿ ಕಣ್ಣೀರಿಳಿಸುತ್ತಿದ್ದೆ? ನನಗೆ ಹೇಳುವವಳು ನೀನೇಕೆ ಮಲಗದಿರುವೆ ಸುಧಾ?

**ಸುಧಾ**—ನನಗಾದರೂ ಚಿಂತೆಗೆ ಬೇಕಷ್ಟು ಕಾರಣಗಳಿವೆ. ನೀವೇಕೆ ಇಷ್ಟೊಂದು ಕಾತರಪಡುತ್ತಿರುವುದು? ಇನ್ನು ಕೆಲವು ದಿನಗಳಲ್ಲೇ ಲಂಡನಿಗೆ ಬಾರ್-ಎಟ್-ಲೋ ಕಲಿಯಹೋಗುವ ನೀವೀಗ ಆನಂದೋತ್ಸಾಹದಿಂದಿರಬೇಕಲ್ಲವೇ?

**ಪ್ರಭಾಕರ**—ನನ್ನ ಪ್ರಾಣಪ್ರಿಯೆಯನ್ನಗಲಿ ಹೋಗಬೇಕಾಗಿರುವಾಗ ನನಗೆ ಚಿಂತೆಗೆ ಕಾರಣವಿಲ್ಲವೇ?

**ಸುಧಾ**—(**ನಾಚಿಕೆಯಿಂದ ತಲೆಬಾಗಿ**) ಪ್ರಿಯ, ನಿಮಗೆ ಚಿಂತೆಗೆ ಕಾರಣವಿಲ್ಲವೆಂದು ನಾನು ಹೇಳಲಿಲ್ಲ. ಆದರೆ ಹೆಣ್ಣು ಮತ್ತು ಗಂಡು ಹೃದಯಗಳ ರೀತಿಯೇ ಬೇರೆ.

**ಪ್ರಭಾಕರ**—ಅಂದರೆ?

**ಸುಧಾ**—ಅಂದರೆ, ಗಂಡು ಪ್ರೇಮವು, ಪರ್ವತ ಪ್ರವಾಹದಂತೆ ಒಮ್ಮೆಯೇ ವಿಪರೀತ ನೆರೆಯಾಗಿ ಹರಿದು, ದೊಡ್ಡ ಪ್ರದರ್ಶನಮಾಡಿ ಅನಂತರ ಬತ್ತಿ ಬರಿದಾಗಿ ಯಾವ ಗೊಡವೆಯನ್ನೂ ಕಟ್ಟಿಕೊಳ್ಳದಿರಬಹುದು. ಪರಂತು ಹೆಣ್ಣು ಪ್ರೇಮಕ್ಕೆ ಅಂತಹ ಪ್ರದರ್ಶನಾಸ್ಪದವಿಲ್ಲ. ತಟಗಳ ನಿರ್ಬಂಧದೊಳಗೆ ಇಳಿತ ಭರತವರಿಯದೆ ಒಳಗಿಂದೊಳಗೆ ಕುಲುಕುಲು ಕುದಿದು ಸದಾ ನೀರವವಾಗಿ, ಏಕಾಂತವಾಗಿ ಹರಿಯಬೇಕದು.

**ಪ್ರಭಾಕರ**—(**ನಸುನಕ್ಕು**) ಅದಕ್ಕಾಗಿಯೇ ಕೋಣೆಯೊಳಗೆ ಏಕಾಂತವಾಗಿ ಹನಿಹನಿಯಾಗಿ ಪ್ರೇಮವನ್ನು ಹರಿಸುತ್ತಿದ್ದುದೇ?

**ಸುಧಾ**—ಇನ್ನು ಕೆಲದಿನಗಳಲ್ಲಿ ನೀವೆಲ್ಲಿಯೋ ನಾನೆಲ್ಲಿಯೋ? (**ಉಕ್ಕಿಬಂದ ಕಣ್ಣೀರೊರಸಿಕೊಳ್ಳುವಳು.**)

**ಪ್ರಭಾಕರ**—ಸುಧಾ, ಅದೇಕೆ ಹಾಗನ್ನುವೆ? ನನ್ನೀ ಸ್ಥೂಲಕಾಯವು ನಿನ್ನಿಂದ ಅದೆಷ್ಟು ದೂರವೇ ಇರಲಿ, ಮನಸ್ಸು ಸದಾ ನಿನ್ನಲ್ಲಿಯೇ ಅನುರಕ್ತವಾಗಿರದಿರುವುದೇ?

**ಸುಧಾ**—ದೂರವೂ, ಕಾಲವೂ ವಿಚಿತ್ರ ಪರಿವರ್ತನಕಾರಿಗಳಲ್ಲವೇ ಪ್ರಿಯ?

**ಪ್ರಭಾಕರ**—ಆ ವಿಷಯದಲ್ಲಿ ಒಂದಿಷ್ಟು ಸಂಶಯ ಬೇಡ ಸುಧಾ! ನಾನು ನಿನ್ನ ತಾಯಿಗೆ ಭಾಷೆ ಕೊಟ್ಟಂತೆ, ನನ್ನ ಪ್ರಾಣವೊಂದಿದ್ದರೆ, ಒಂದೇ ವರ್ಷದೊಳಗೆ ನಿನ್ನನ್ನು ಮದುವೆಯಾಗದಿರಲಾರೆನು. ಎಷ್ಟೊಂದು ದೂರ ಹೋಗಿ ವಾಸಿಸಿದರೂ, ಎಂತಹ ಕಾಲ ಪರಿಸ್ಥಿತಿಯಲ್ಲಿಯೂ ನನ್ನ ಹೃದಯಪಟದ ನಿನ್ನ ಪ್ರೇಮಮೂರ್ತಿಯು ಒಂದಿಷ್ಟೂ ಮಾಸಲಾರದು ಸುಧಾ!

**ಸುಧಾ**—ಪ್ರಿಯ, ಆ ವಿಷಯದಲ್ಲಿ ನನಗಾವ ಸಂದೇಹವೂ ಇಲ್ಲ. ಆದರೆ ಒಂದು ವರ್ಷದ ವರೆಗೆ ನಿಮ್ಮನ್ನಗಲಿರುವುದಾದರೂ ಹೇಗೆ? (**ಕಣ್ಣೀರಿಡುವಳು**)

**ಪ್ರಭಾಕರ**—(**ತುಂಬಿ ಬರುವ ಕಣ್ಣೀರನ್ನು ಕರವಸ್ತ್ರದಿಂದ ಮರೆಯಾಗಿ ಒರಸಿ**) ಕಣ್ಣೀರ ಧಾರೆಯಿಂದ ಹೀಗೆ ನನ್ನ ಹೃದಯವನ್ನೇಕೆ ತಂಯುವೆ ಸುಧಾ? ನಿನ್ನ ಹೃದಯವೆಷ್ಟು ಬೆಂದು ಬೇಗುದಿಗೊಳ್ಳುತ್ತಿರುವುದೆಂಬುದನ್ನು ನಾನು ಚೆನ್ನಾಗಿ ಬಲ್ಲೆನು; ಅಂತಹ ಬೇಗೆಯೇ ನನ್ನ ಹೃದಯವನ್ನೂ ಸುಡುತ್ತಿರುವುದೆಂದು ಮಾತ್ರ ನಾನು ನಿನಗೆ ಸಮಾಧಾನ ಹೇಳಬಲ್ಲೆನು.

**ಸುಧಾ**—(**ಗಟ್ಟಿ ಮನಸ್ಸುಮಾಡಿ ಕಣ್ಣೀರನ್ನು ಚೆನ್ನಾಗಿ ಒರಸಿ**) ಪ್ರಿಯ, ರಾತ್ರಿ ಬಹಳವಾಯಿತು. ಹೋಗಿರಿ, ಮಲಗಿರಿ.

**ಪ್ರಭಾಕರ**—ಎಲ್ಲಿ ಹೋಗುವುದು? ನಿದ್ದೆ ಬಂದರಲ್ಲವೆ ಮಲಗುವುದು? ಸುಧಾ, ನಿನ್ನ ಸವಿನುಡಿಯ ಮಧುವನ್ನು ಸೇವಿಸಿದಷ್ಟೂ ನನ್ನ ತೃಷೆಯು ಹೆಚ್ಚುವುದು. ಅನ್ನ, ನೀರು, ನಿದ್ರೆ, ಆರಾಮದ ಗೊಡವೆಯಿಲ್ಲದೆ ಅಹರ್ನಿಶಿ ನಿನ್ನೊಡನೆ ಸಲ್ಲಾಪಿಸುತ್ತಾ ಕಾಲಕಳೆಯಬೇಕೆಂದು ತೋರುವುದು. ನಿನ್ನ ಸಂಪರ್ಕ ಪ್ರಕಾಶರಹಿತ ಜೀವನವು ಕಳೆಗುಂದಿ ನೀರಸವೆನಿಸುವುದು.

**ಸುಧಾ**—ಪ್ರಿಯ, ವಿಪರೀತತೆಯರ ಆರಂಭವು ವಿಷಮದಲ್ಲಿ ಕೊನೆಗೊಂದ ಬಹುದು. ಆದುದರಿಂದ ನಿಮ್ಮ ಪ್ರೇಮವನ್ನು ಇನ್ನೊಂದು ವರ್ಷದ ವರೆಗೆ

ಒಂದು ಪರಿಮಿತಿಯೊಳಗಿಟ್ಟುಕೊಂಡು, ಚೆನ್ನಾಗಿ ಅಭ್ಯಾಸಮಾಡಿ ಯಶಸ್ವಿಯಾಗಿ ಬನ್ನಿರಿ. ಆ ಮೇಲೆ ನಾವು ಜತೆ ಹಕ್ಕಿಗಳಂತೆ ಪ್ರೇಮದೆರಕದಿಂದೊಂದುಗೂಡಿ ಆನಂದದಿಂದ ದಾಂಪತ್ಯಜೀವನ ನಡೆಸುವ.

**ಪ್ರಭಾಕರ**—ಪ್ರಿಯೆ, ವೈಶಾಖ ರಾತ್ರಿಯ ಬೆಳ್ದಿಂಗಳ ತಂಪಿನಲ್ಲಿಯೂ, ಉರಿಮಸಗಿದ್ದ ನನ್ನ ಹೃದಯವು ನಿನ್ನ ಸಂಕರ್ಷ, ಸಲ್ಲಾಪ ಸಲಿಲ ಸೇಚನದಿಂದ ತಣಿದು ಶಾಂತವಾಯಿತು. ಸುಧಾ, ಪುನಃ ನನ್ನನ್ನು ಅಗ್ನಿಕೊಂಡಕ್ಕೆ ದೂಡಲೆಳಸುವೆಯಾ?

**ಸುಧಾ**—(ಕೌತುಕಗೊಂಡು) ಪ್ರಿಯ, ಇದೇನನ್ನುವಿರಿ?

**ಪ್ರಭಾಕರ**—ಸುಧಾ, ಅನ್ನುವುದೇನೆಂದು ತಿಳಿಯದೇ? ನಾನು ನಿನ್ನನ್ನು ಬಿಟ್ಟು ಹೋಗಲಾರೆನು.

**ಸುಧಾ**—(ಒಮ್ಮೆಯೇ ತಳಮಳಗೊಂಡು) ಆಗದಾಗದು; ಎಂತಹ ಆವೇಗದಲ್ಲಿಯೂ ವಿವೇಕಗೆಟ್ಟು ನಡೆಯಬಾರದು ಪ್ರಿಯ!

**ಪ್ರಭಾಕರ**—ಪ್ರೇಮದುಬ್ಬರವು ವಿವೇಕದ ತಟದೊಳಗೆ ಹರಿಯುವುದೇ ಪ್ರಿಯೆ? ಇರಲಿ, ಇಲ್ಲಿ ನನ್ನ ಅವಿವೇಕವಾದರೂ ಏನು? ನಾವೀಗಲೇ ಸತಿಪತಿಯರಾಗಿರುವುದಿಲ್ಲವೇ ಸುಧಾ? ವಿವಾಹ ವಿಧಿಯೆಂಬುದು ಬರಿಯ ಬಾಹ್ಯಾಡಂಬರಲ್ಲವೇ?

**ಸುಧಾ**—ಅದೇನೇ ಇರಲಿ, ವಿವಾಹವಾಗದೆ ನಾವು ಸತಿಪತಿಯರಂತಿರುವುದು ತೀರಾ ಅವಿವೇಕವಲ್ಲವೇ? ಮತ್ತದು ದೊಡ್ಡ ಅಪವಾದಕ್ಕೆ ಕಾರಣವಾಗದೇ? ಇಷ್ಟರಲ್ಲೇ ನಮ್ಮ ಕುರಿತು ಜನರು ಏನೆಲ್ಲಾ ಮಾತಾಡಿಕೊಳ್ಳುತ್ತಿರುವರೆಂಬುದನ್ನು ನೀವು ಬಲ್ಲಿರೇ?

**ಪ್ರಭಾಕರ**—ಜನರೇನೇ ಹೇಳಲಿ, ಎಂತಹ ಅಪವಾದವೇ ಬರಲಿ, ಇಡೀ ಲೋಕವೇ ಬೇಕಾದರೆ ಮುನಿದು ಬೀಳಲಿ, ಅವೆಲ್ಲಕ್ಕೂ ಸಂತೋಷದಿಂದ ತಲೆಯೊಡ್ಡಿ ನಿನ್ನನ್ನು ಮದುವೆಯಾಗಲು ನಾನು ಸಿದ್ಧನಿರುವಾಗ ಇನ್ನೂ ಇನ್ನೂ ಏಕೆ ಭೀತಿಗೊಳ್ಳುವೆ ಸುಧಾ?

**ಸುಧಾ**—(ಸುಮ್ಮನಿರುವಳು)

**ಪ್ರಭಾಕರ**—ಅದೇಕೆ ಸುಮ್ಮನಾದೆ ಸುಧಾ? ಇನ್ನು ನಾನು ನಾಲ್ಕೈದು ದಿವಸಗಳಲ್ಲಿ ನಿನ್ನನ್ನಗಲಿ ಬಹುದೂರ ಹೋಗುವೆನು. ನಿನ್ನನ್ನು ಮತ್ತೆ ಕಾಣುವುದೆಂದರೆ ಒಂದು ವರ್ಷದ ನಂತರ. ಆ ಮೊದಲೊಮ್ಮೆ...........

**ಸುಧಾ**—ಪ್ರಿಯ, ನಾನು ಸದಾ ನಿಮ್ಮವಳೇ ಆಗಿರುವಾಗ ಅದೇಕೆ ಅಷ್ಟೊಂದು ಕಾತರ ಪಡುವಿರಿ? ನಾವೆಷ್ಟು ಯಥಾರ್ಥ ಹೃದಯಿಗಳಿದ್ದರೂ ನಮ್ಮ ಸಮಾಜದ ಕಟ್ಟು ಕಟ್ಟಳೆಗಳನ್ನೊಡೆದು ಇಚ್ಛಾನುಸಾರ ನಡೆದರೆ ನಮಗೇನೇ ಹಾನಿಯಲ್ಲವೇ? ನಿಮ್ಮಷ್ಟೇ ನನ್ನ ಹೃದಯವೂ ಸಂತಪ್ತವಾಗಿರುವುದಿಲ್ಲವೇ? ಆದರೆ............

**ಪ್ರಭಾಕರ**—(ನಡುವೆ ಬಾಯಿ ಹಾಕಿ) ಆದರೆ—ಆದರೆ ಎಂಬ ಸಂದೇಹವು ಇನ್ನೂ ನಿನ್ನನ್ನು ಬಿಟ್ಟಿಲ್ಲವೇ ಸುಧಾ? ನನ್ನ ಮೇಲೆ ನಿನಗೆ ಸಂಪೂರ್ಣ ನಂಬಿಕೆ ಇಲ್ಲವೇ?

**ಸುಧಾ**—ನೀವಂತಹ ಮಾತುಗಳನ್ನಾಡಬಾರದು. ನೀವೇ ನನ್ನ ಜೀವನ ಸರ್ವಸ್ವವಾಗಿರುವಾಗ ನಿಮ್ಮ ಮೇಲೆ ನನಗೆ ಅಪನಂಬಿಕೆಯೇ? ಆದರೆ........

**ಪ್ರಭಾಕರ**—ಮತ್ತೂ ಆದರೆಯೆ ಸುಧಾ?

**ಸುಧಾ**—ಇಲ್ಲ ಇಲ್ಲ ಪ್ರಿಯ, ನಿಮಗಷ್ಟು ಕಟುವಾದ ಆ ಶಬ್ದವನ್ನೇ ನಾನಿನ್ನೆತ್ತಲಾರೆನು. ನನ್ನ ಪ್ರಾಣವೂ ಮಾನವೂ ಎಲ್ಲವೂ ನೀವೇ.

**ಪ್ರಭಾಕರ**—ಹಾಗಾದರೆ ಒಂದೊಮ್ಮೆ ನನ್ನ ಮನೋರಥವನ್ನು ಸಲಿಸುವೆಯ ಸುಧಾ? ಅದಾವುದೋ ದುರ್ದಮನೀಯ ಉತ್ತೇಜನವು ನನ್ನ ನರನಾಡಿಗಳಲ್ಲಿ ತುಂಬಿ ಶರೀರವನ್ನು ಥರಗುಟ್ಟಿಸುತ್ತಿರುವುದು. ಕಡಿವಾಣ ಕಡಿದು ಚಿಗಿದೋಡುವ ಕೊಬ್ಬಿದ ಕುದುರೆಯಂಥಾಗಿರುವುದು ನನ್ನ ಮನಸ್ಸು. ಕ್ಷಮಿಸು, ಸುಧಾ ಕ್ಷಮಿಸು. ಒಮ್ಮೆ ನಿನ್ನ ಸಂಯೋಗ ಸುಖವಿತ್ತು ನನ್ನೀ ಮನದ ಕ್ಷೋಭೆಯನ್ನಿಳಿಸು. ಆ ಮೇಲೆ ಶಾಂತಚಿತ್ತದಿಂದ, ನಿನ್ನನ್ನು ಬೀಳ್ಕೊಟ್ಟು ಇಂಗ್ಲೆಂಡಿಗೆ ತೆರಳುವೆನು.

**ಸುಧಾ**—ನಾನೇನು ಮಾಡಲಿ ಪ್ರಿಯ? ನನ್ನನ್ನು ಜನಾಪವಾದದ ಸಿಲುಬೆಗೇರಿಸಿ ಕೊಲ್ಲಬೇಕೆಂದಿರುವಿರಾ?

**ಪ್ರಭಾಕರ**—ಅಂತಹ ಸಂದರ್ಭವು ಎಂದೆಂದಿಗೂ ಬರಬಾರದೆಂದು ಭರವಸೆ ಕೊಡುವೆನು ಪ್ರಿಯೆ; ಒಂದೊಮ್ಮೆಗೆ ಹಾಗಾದರೆ ನಾನೂ ನಿನ್ನೊಂದಿಗೆ ಸಿಲುಬೆಗೇರಲು ಸಿದ್ಧನಿರುವಾಗ ನಿನಗಾ ಚಿಂತೆಯೇಕೆ?

**ಸುಧಾ**—ನನಗೇನು ಚಿಂತೆ? ನನ್ನ ಪ್ರಾಣವೂ, ಮಾನವೂ ನೀವೇಯೆಂದು ಮೊದಲೇ ಹೇಳಿದೆನಲ್ಲವೇ?

**ಪ್ರಭಾಕರ**—ಸುಧಾ, ನಿನ್ನಂತಹ ಪ್ರಿಯೆಯನ್ನು ಪಡೆದ ನಾನೇ ಧನ್ಯನು. ನಾನೆಲ್ಲಿ ಹೋದರೂ ನನ್ನ ಪ್ರಾಣವು ನಿನ್ನೊಂದಿಗೇನೇ ಇರುವುದು. ನಮ್ಮಿಬ್ಬರ ಮಾನವು ಪರಸ್ಪರ ನಮ್ಮನ್ನೇ ಹೊಂದಿರುವ ಸೂತ್ರಲ್ಲದೆ ಇತರ ಜನರನ್ನಲ್ಲ. ಆದುದರಿಂದ ನೀನು ಯಾವ ಭೀತಿಯನ್ನೂ ಕಟ್ಟಿಕೊಳ್ಳಬೇಕಾಗಿಲ್ಲ.

**ಸುಧಾ**—ನಿಮ್ಮ ಕುರಿತು ನಾನಾವ ಭೀತಿ ಸಂದೇಹಗಳನ್ನೂ ಕಟ್ಟಿಕೊಂಡಿಲ್ಲೆಂದು ಮೊದಲೇ ಹೇಳಿದ್ದೆನಲ್ಲವೇ? **(ಧಾರೆಗಟ್ಟಿ ಹರಿವ ಕಣ್ಣೀರನ್ನು ಸೆರಗಿಂದ ಒರಸಿಕೊಳ್ಳುವಳು)**

**ಪ್ರಭಾಕರ**—ಅದೇಕೆ ಮತ್ತೂ ಕಣ್ಣೀರಿಳಿಸುವೆ ಸುಧಾ?

**ಸುಧಾ**—ಎಷ್ಟೊಂದು ತಡಕೊಂಡರೂ ಅದೇಕೋ ಕಣ್ಣೀರು ಧಾರೆಗಟ್ಟಿ ಹರಿಯುತ್ತಿರುವುದು.

**ಪ್ರಭಾಕರ**—ಪ್ರಾಯಶಃ ನನ್ನಿಂದಲೇ ಒರಸಿಕೊಳ್ಳುವ ಸೇವೆ ಪಡೆಯಲೆಂದೋ ಏನೋ. **(ಹತ್ತಿರಹೋಗಿ ಕರವಸ್ತ್ರದಿಂದ ಸುಧೆಯ ಕಣ್ಣೀರೊರಸುವನು)**

**ಸುಧಾ**—**(ನಸುನಕ್ಕು)** ಸಾಕು, ಸಾಕು ದೂರ ಸರಿಯಿರಿ. **(ದೂಡುವಳು)**

**ಪ್ರಭಾಕರ**—ನಾನೊಬ್ಬನೇ ಸರಿಯುವುದೇ ನೀನೂ ಬರುವೆಯಾ? ಬಾ, ಬಾ, ಸುಧಾ. **(ಕೈಹಿಡಿದು ಪ್ರೇಮಗೀತ ಹಾಡುತ್ತಾ ಬಿಗಿದಪ್ಪಿದನು)**

---

## ೪ನೇ ದೃಶ್ಯ—ಬೀದಿ

[**ಅಮೃತರಾಯ ಯೋಚನಾಮಗ್ನನಾಗಿ ಪ್ರವೇಶಿಸುವನು**]

**ಅಮೃತರಾಯ**—'ಉದ್ಯೋಗಂ ಪುರುಷ ಲಕ್ಷಣಂ' ಎಂದು ನಾಡಿನ ದೊಂದು ನೀತಿವಾಕ್ಯ. ಆದರೆ ಇದನ್ನು ಮಾಡಿದವರಿಗೆ ಅಷ್ಟೊಂದು ದೂರದೃಷ್ಟಿಯಿದ್ದಂತೆ ತೋರುವುದಿಲ್ಲ. ಯಾಕೆಂದರೆ ಆಗಿನ ಯಾವ ಸಂಗತಿಗಳೂ ಈಗಿನ ಕಾಲಕ್ಕೆ ಸರಿ ಬೀಳುವುದೇ ಇಲ್ಲ. ಉದಾಹರಣೆಗಾಗಿ 'ಸತ್ಯಂ ವದ ಧರ್ಮಂ ಚರ' ಎಂಬ ನೀತಿ ವಾಕ್ಯವನ್ನು ತೆಗೆದುಕೊಳ್ಳುವ. ಈ ಕಾಲದಲ್ಲಿ ಯಾರಾದರೂ ಸತ್ಯ ಮತ್ತು ಧರ್ಮವನ್ನೇ ಹಿಡಿದುಕೊಂಡು ಹೋದರೆ ಅವನ ಗತಿಯೆಂದರೆ 'ಗಂಟ ಕೋಲು' ಇಲ್ಲವೇ 'ಗಳ್ಳಾಸು'. ಅದಿರಲಿ, 'ಸತಿಗೆ ಪಾತಿವ್ರತ್ಯವೇ ಭೂಷಣಂ' ಎಂಬೀ ಮಾತನ್ನು ತೆಗೆದುಕೊಳ್ಳುವ. ಇದೇನು ಈ

ಕಾಲಕ್ಕೆ ಸರಿ ಬಿದ್ದೀತೆ? ಆದುದರಿಂದ ಇದನ್ನು 'ಪತಿಗೆ ಸತೀವ್ರತವೇ ಭೂಷಣಂ' ಎಂದು ಚೇಂಜ್ ಮಾಡ್ಲೇ ಬೇಕು. ಈಗ ಇನ್ನೊಂದು ಮಾತಿನ ಹಣೆ ಬರಹ ನೋಡಿ. 'ಕೃಷಿತೋ ನಾಸ್ತಿ ದುರ್ಭಿಕ್ಷಂ' ಅಂತೆ. ಹ ಹ! ಈಗ ನಮ್ಮ ಕೃಷಿಕರಲ್ಲಿ ಸುಭಿಕ್ಷೆ ಯಾರಿಗಿದೆ? ಈಗ 'ಕೃಷಿತೋ ಜಾಸ್ತಿ ದುರ್ಭಿಕ್ಷಂ' ಹೀಗೆಯೇ ನೋಡಿ, 'ಉದ್ಯೋಗಂ ಪುರುಷಲಕ್ಷಣಂ' ಎಂಬ ನಾಣ್ಣುಡಿಯನ್ನು ಈಗಿನ ಕಾಲಕ್ಕೆ ತಕ್ಕಂತೆ 'ನಿರುದ್ಯೋಗಂ ಪುರುಷಲಕ್ಷಣಂ' ಎಂದು ಬದಲಾಯಿಸಬೇಕು. ಯಾಕಂದರೆ ಈಗಲೋಕದಲ್ಲಿ ಉದ್ಯೋಗಿಗಳಿಗಿಂತ ನಿರುದ್ಯೋಗಿಗಳ ಸಂಖ್ಯೆಯೇ ಹೆಚ್ಚು. ನಾನೂ ಬಹು ಪಕ್ಕ ಈ ಸಾಲಿಗೇನೇ ಸೇರಿದವನೆನ್ನಿ. ಆದರೆ ಹಿಂದೂಸ್ಥಾನದ ನಿರುದ್ಯೋಗಿಗಳಿಗೆ ಇಂಗ್ಲೆಂಡು ಅಮೇರಿಕಗಳಂತೆ ಊಟದ ಗತಿ ತೋರಿಸುವವರೂ ಇಲ್ಲ. ಹಾಗೆ ಮಾಡಿಕೊಳ್ಳುವ ಶಕ್ತಿಯೂ ಅವರಲ್ಲಿಲ್ಲ. ಹಾಗೆಂದು ಉದ್ಯೋಗವಿಲ್ಲದೆ ಸಾಯಲಿಕ್ಕಾಗುತ್ತದೆಯೆ? ಹೇಗಾದರೂ ಮಾಡಿ ಬದುಕಬೇಕಲ್ಲ! ಈ ಕಾಲದಲ್ಲಿ ಏನಾದರೂ ಮಾಡಿ ಬದುಕುವುದೆಂದರೆ ಏಜೆನ್ಸಿ ತೆಗೆದುಕೊಳ್ಳುವುದು. ಹಾಗೆ ಅಗ್ಗದ ಏಜೆನ್ಸಿಗಳಿಗೆ ಅಗ್ಗದ ಏಜೆಂಟ ನಾನು. ನಾನೊಂದು ಏಜೆನ್ಸಿ ವ್ಯಾಪಾರವನ್ನೇ ನಡಿಸುತ್ತಿದ್ದೇನೆ. ಆ ಏಜೆನ್ಸಿ ಈ ಏಜೆನ್ಸಿ ಅಂತ ಹೇಳಿ ಇವುಗಳಲ್ಲಿ ಸೇಕಡಾ 99.9 ಇನ್ಶೂರೆನ್ಸ್ ಏಜೆನ್ಸಿಗಳೇ. ನಾನು ತೆಗೆದುಕೊಂಡ ಏಜೆನ್ಸಿಗಳಿಗೆ ಲೆಕ್ಕವೇ ಇಲ್ಲ. ಆದರೆ ಯಾವುದರಿಂದಲೂ ಬರ್ಕತಿಲ್ಲ. ಈಗ ಒಂದು ಫಾಯಿದೆಯ ಕೇಸು ಸಿಕ್ಕಿದೆ. ಒಬ್ಬ ಮುಕುಂದ ರಾಯರಂತೆ. ರಿಟಾಯರ್ಡ್ ಸಬ್ ಜಡ್ಜರಂತೆ. ಅಸಾಮಿ ಯೇನೋ ಕಾಸು ಬಿಡುವದಲ್ಲ. ಆದರೆ ಈಗ ನನ್ನಿಂದ ಅವರಿಗೊಂದು ಅತ್ಯಂತ ಗುಪ್ತ ಕೆಲಸವಾಗಬೇಕಾಗಿದೆ. ನಾನು ಸಹ ಇದೇ ಸಂದರ್ಭವೆಂದು ಗಟ್ಟಿ ಹಿಡಿದೆ. ಆದುದರಿಂದ ಕೆಲಸವಾದ ಮೇಲೆ ರೂಪಾಯಿ 500 ಕೊಡುತ್ತೇನೆಂದು ಮಾತು ಕೊಟ್ಟಿದ್ದಾರೆ. ಕೆಲಸವನ್ನೇನೋ ವಹಿಸಿಕೊಂಡೆ. ಇನ್ನು ಸಾಧಿಸುವ ಬಗೆ ಹೇಗೋ? ಸುಧೆಯನ್ನು ಯಾರಾದರೊಬ್ಬನೊಂದಿಗೆ ನಿಲ್ಲಿಸಿ ಫೋಟೋ ತೆಗಿಸಿ ಕೊಡಬೇಕಂತೆ. ಯಾರ್‍ಯಾರ ಅನ್ನ ತೆಗಿಯುವ ಕೆಲಸವಿದು. ಆದರೆ ನಮಗೆ ಮಾಡದೆ ನಿರ್ವಾಹವಿಲ್ಲ. ಆದರೆ ಬಹಳ ಕಷ್ಟ ಕೆಲಸ. ಏನಾಗುವುದೋ ನೋಡುವ. (**ಹೋಗುವನು**)

# ೫ನೇ ದೃಶ್ಯ—ಮನೆ

[ಮಂಗಳೂರಿನ ಕದ್ರಿಯ ತುಳಸಿಬಾಯಿಯ ಮನೆಯ ಒಂದು ಕೋಣೆಯಲ್ಲಿ ಸುಧೆಯು, ಆಗತಾನೆ ಟಪ್ಪಾಲು ಪೇದೆಯು ತಂದುಕೊಟ್ಟ ಪಾರ್ಸೆಲೊಂದನ್ನು ಒಡೆದು ಅದರೊಳಗೆ ಪ್ರಭಾಕರನ ಭಾವಚಿತ್ರವನ್ನು ಕಂಡು ಅದನ್ನು ತಿರುಗಿಸಿ ತಿರುಗಿಸಿ ನೋಡಿ ಅತ್ಯಾನಂದಪಡುವಳು. ಆಮೇಲೆ ಅದನ್ನು ಮೇಜಿನ ಮೇಲಿಟ್ಟು, ಪ್ರಭಾಕರನು ಬರೆದಿರುವ ಪತ್ರವನ್ನು ಓದುವಳು. ಆಗ ತುಳಸಿಬಾಯಿಯು, ಮಹಾ ವಿಪತ್ತಿಗೊಳಗಾಗಿ ಕಂಗೆಟ್ಟವಳಂತೆ ತಳಮಳಗೊಂಡು ಸುಧೆಯ ಕೋಣೆಗೆ ಪ್ರವೇಶಿಸಿ, ತಲ್ಲೀನತೆಯಿಂದ ಪ್ರಭಾಕರನ ಪತ್ರವನ್ನೇ ಓದುತ್ತಾ ಆನಂದಿಸುತ್ತಿರುವ ಸುಧೆಯನ್ನು ಧುರಧುರನೆ ನೋಡುತ್ತಾ ತುಸು ಹೊತ್ತು ನಿಲ್ಲುವಳು. ಆ ಮೇಲೆ ಕರ್ಕಶವಾಗಿ]

**ತುಳಸಿಬಾಯಿ**—ಸುಧಾ, ನೀನು ಬಹಳ ಆನಂದದಿಂದಲೇ ಇರುವೆಯಲ್ಲವೇ?

**ಸುಧಾ**—ಹೌದಮ್ಮಾ, ನನಗಿಂದು ಅತ್ಯಾನಂದದ ದಿನ. ಎಷ್ಟೋ ದಿನಗಳಿಂದ ನಿರೀಕ್ಷಿಸಿಕೊಂಡಿದ್ದ ಅವರ ಭಾವಚಿತ್ರವು ಇಂದೀಗ ನನಗೆ ದೊರೆತಿರುವುದು. ಅದರೊಂದಿಗೆ ಅವರ ಪ್ರೇಮಪೂರ್ವಕವಾದ ಪತ್ರವೂ ಇರುವುದು. (ಪ್ರಭಾಕರನ ಭಾವಚಿತ್ರವನ್ನು ಮೇಜಿಯಿಂದ ತೆಗೆದು ಅದರ ಆವರಣದ ಕಾಗದತೆಗೆದು) ಅಮ್ಮಾ ನೋಡು, ಎಷ್ಟು ಚಂದವಾಗಿ ಕಾಣುವರವರು! ಫಕ್ಕನೆ ಅವರನ್ನು ಹಿಂದುವೆಂದು ಹೇಳಲು ಸಾಧ್ಯವಿದೆಯೇ? 'ಪಕ್ಕಾ' ಧೊರೆಯಾಗಿ ಹೋಗಿರುವರಲ್ಲವೇ?

**ತುಳಸಿ**—ಸುಧಾ, ಎಂತಹ ಅವಿವೇಕವಮಾಡಿದೆ? ಪ್ರಭಾಕರನೂ ಒಂದಿಷ್ಟು ವಿಚಾರಮಾಡದೆ ಹೋದನೆ?

**ಸುಧಾ**—ಅಮ್ಮಾ, ತನ್ನ ಹೃತ್ಪೂರ್ವಕ ಪ್ರೇಮವನ್ನು ನಿನಗೊಪ್ಪಿಸಬೇಕೆಂದು ಕಾಗದದಲ್ಲವರು ಎರಡು ಮೂರು ಬಾರಿ ಬರೆದಿರುವರು.

**ತುಳಸಿ**—ಸುಧಾ, ಸಾಕು ಮಾಡಿನ್ನು ಪ್ರಭಾಕರನ ಮಾತು! ಈಗ ನಮಗೊದಗಿರುವ ಉಭಯ ಸಂಕಟದಿಂದ ನಾವು ಪಾರಾಗುವುದಾದರೂ ಹೇಗೆ? ನೀನೆಂದಿಗೂ ವಿಚಾರಗೆಟ್ಟು ಕೆಲಸ ಮಾಡುವವಳಲ್ಲೆಂಬ ನಂಬಿಗೆಯಿಂದ ನಿನಗೆ ನಾನು ಕೊಟ್ಟ ಸ್ವತಂತ್ರವನ್ನು ನೀನೀ ರೀತಿ ದುರುಪಯೋಗ ಪಡಿಸುವುದೇ? ಇನ್ನು ನಮ್ಮ ಗತಿಯೇನು? ನಮ್ಮ ಮಾನವನ್ನು ನಾವು ಕಾಪಾಡಿಕೊಳ್ಳುವುದಾದರೂ ಹೇಗೆ?

**ಸುಧಾ**—ಅಮ್ಮಾ, ಅದೇಕಷ್ಟು ಸಂತಾಪಪಡುವೆ? ಅವರು ನನ್ನನ್ನು ಮದುವೆ ಮಾಡಿಕೊಳ್ಳದಿರುವರೇ? ಇದೋ ಈ ಕಾಗದವನ್ನೋದು. ಅವರಿಗೆ ನನ್ನಲ್ಲಿಷ್ಟು ಪ್ರೇಮವಿದೆಯೆಂದು............

**ತುಳಸಿ**—ಇನ್ನೂ ಇನ್ನೂ ಅದನ್ನೇ ಮಾತಾಡುವೆಯಾ? ನಾವು ಮಾನ ಹೀನರೆಂದಾದ ಮೇಲೆ ಏನಾದರೇನು?

**ಸುಧಾ**—ಅಮ್ಮಾ, ಕ್ಷಮಿಸಿರಿ. ಅವರ ಪ್ರೇಮದುಬ್ಬರದ ಪ್ರವಾಹದಲ್ಲಿ ನಾನೂ ವಿಚಾರ ವಿವೇಕದ ತಳಬಿಟ್ಟು ತೇಲಿಹೋಗದೆ ನಿರ್ವಾಹವಿಲ್ಲದಾಯಿತು. ಪ್ರೇಮಸಂಯೋಗ ತೃಷೆಯು ಬಾಯ್ದೆರೆದು ಬರುವಾಗ, ನಿಗ್ರಹದ ನಿಷ್ಠುರತೆ ಯಿಂದದನ್ನು ನಿರಾಶೆಗೊಳಿಸುವುದು ತರುಣಿ ಹೃದಯಕ್ಕೆ ಅಸಹನೀಯ ವಾಯಿತು.ಅದೆಲ್ಲಿ ವಿಮುಖವಾಗಿ ಅನ್ಯಾಶ್ರಯಪಡೆವುದೋ ಎಂಬ ಭೀತಿಯೂ ಹಿರಿದಾಯಿತು.

**ತುಳಸಿ**—ಆಗ ಅದಾಯಿತು, ಇದಾಯಿತೆನ್ನುವವಳು ಈಗೇನು ಮಾಡುವೆ?

**ಸುಧಾ**- ಮಾಡುವುದೇನು? ಅವರಿಗೆ ಸರ್ವ ಸಂಗತಿಗಳನ್ನೂ ತಿಳಿಸುವೆನು.

**ತುಳಸಿ**—ಅವನಿಗೆ ತಿಳಿಸಿ ಪ್ರಯೋಜನವೇನು? ನಮ್ಮ ಮಾನವಂತೂ ಉಳಿವ ಉಪಾಯವೇ ತೋರುವುದಿಲ್ಲ. ಇಷ್ಟರಲ್ಲೇ ಜನರೆಲ್ಲಾ ಗುಜುಗುಜು ಮಾತಾಡತೊಡಗಿರುವರೆಂದು ಕೊರಗ ಹೇಳಿದ.

**ಸುಧಾ**—ನಾನೇನು ಮಾಡುವುದಮ್ಮಾ ಅದಕ್ಕೆ?

**ತುಳಸಿ**—ಏನು, ನೀನೇನು ಮಾಡುವುದೇ? ಒಂದಿಷ್ಟು ಬುದ್ಧಿಯಿಲ್ಲದೆ ಹೋಯಿತೇ ನಿನಗೆ? ಪ್ರಭಾಕರನೂ ತೀರಾ ತಿಳಿಗೇಡಿಯಾಗಿ ಹೋದನೇ? ಎಂತಹ ಪ್ರಮಾದವಾಗಿ ಹೋಯಿತು! ನಾನು ನಿಮ್ಮನ್ನೊಟ್ಟಗಿರಬಿಟ್ಟುದೇ ತಪ್ಪು.

**ಸುಧಾ**—ಅಮ್ಮಾ, ನಿನ್ನದೇನು ತಪ್ಪು? ತಪ್ಪು ನನ್ನದು. ಅವರ ಪ್ರಣಯವೇಗದ ಸೆಳತಕ್ಕೆ ಸಿಕ್ಕಿ ಮತಿಗೆಟ್ಟು ವರ್ತಿಸಿದವಳು ನಾನು. ಅವರು ಎಂದೆಂದಿಗೂ ನಮ್ಮನ್ನು ಬಿಟ್ಟು ಹಾಕಲಾರರಮ್ಮಾ.

**ತುಳಸಿ**—ಅವನಿಚ್ಛೆ ಎಲ್ಲಿ ನಡೆಯುವುದು ಸುಧಾ? ಅವನ ತಂದೆ ಮುಕುಂದ ರಾಯರು ಮೊದಲೇ ನಮ್ಮ ವಿರೋಧಿಯಿದ್ದು ನಮ್ಮ ಮೇಲೆ ನಾನಾ ಅಪವಾದ ಹೊರಿಸಿರುವರು. ಈಗಂತೂ ಅವರಿಗೆ ಬಾಯಿಯೇ ಸಾಲದು.

**ಸುಧಾ**—ತಂದೆಯಂತಿರಲಿ, ಇಡೀ ಲೋಕವೇ ವಿರೋಧಿಸಿದರೂ ಅವರು ನನ್ನನ್ನೇ ಮದುವೆಯಾಗದಿರರಮ್ಮಾ.

**ತುಳಸಿ**—ನಿನಗಿಷ್ಟು ವಯಸ್ಸಾದರೂ ಲೋಕಾನುಭವದಲ್ಲಿ ಕೇವಲ ಶಿಶು ನೀನು. ಮಾನಹೀನಳಾಗಿ, ನೀತಿ ಭ್ರಷ್ಟಳಾಗಿ, ಸಮಾಜ ಭಹಿಷ್ಕೃತೆಯಾಗುವ ನಿನ್ನನ್ನು ಪ್ರಭಾಕರನು ವಿವಾಹ ಮಾಡಿಕೊಳ್ಳುವನೆ?

**ಸುಧಾ**—ನನಗಾ ವಿಷಯದಲ್ಲಿ ಒಂದಿಷ್ಟೂ ಸಂದೇಹವಿಲ್ಲ. ಅಮ್ಮಾ ಅವರ ಪತ್ರವನ್ನು ನಿನಗೊಮ್ಮೆ ಓದಿ ಹೇಳಲೇ?

**ತುಳಸಿ**—ಹೌದೌದು ಪತ್ರ! ವಿಲಾಯತಿಯಲ್ಲಿದ್ದುಕೊಂಡು ಎಷ್ಟು ಬೇಕಾದರೂ ಪತ್ರ ಬರೆಯುಬಹುದು. ಆದರೆ ಅವನು ಮನೆಮಾರು, ಆಸ್ತಿಬದುಕು, ಬಂಧುಬಳಗ, ಜಾತಿನೀತಿಯನ್ನೆಲ್ಲಾ ತ್ಯಜಿಸಿ, ನಿನ್ನನ್ನು ಮದುವೆಯಾಗಬೇಕಾಗಿ ಬರುವಾಗ ಹಿಂದು ಮುಂದೆ ವಿಚಾರಿಸಿಕೊಳ್ಳಲೇ ಬೇಕಾಗುವುದು.

**ಸುಧಾ**—ಛೆ! ವೃಥಾ ಏಕೆ ಇನ್ನೂ ಇನ್ನೂ ಸಂದೇಹಪಡುವೆ ಅಮ್ಮಾ! "ಸುಧಾ ಒಂದೆರಡು ಸಲವಾದರೂ ನಿನ್ನ ನೆನವರಿಕೆಯಾಗಿ ಕಣ್ಣೀರಿಡದ ದಿನವಿಲ್ಲ. ನೀನು ನನಗಾಗಿಯೇ ನಿರ್ಮಿಸಲ್ಪಟ್ಟಿರುವೆಯೋ ಏನೋ! ಪುನಃ ಬಂದು ನಿನ್ನೊಡನೆ ಸೇರುವ ದಿನಗಳನ್ನೆಣಿಕೆ ಹಾಕುತ್ತಾ ಕಾಲ ಕಳೆಯುತ್ತಿದ್ದೇನೆ" ಎಂದು ಬರೆದಿರುವರಮ್ಮಾ ಅವರು.

**ತುಳಸಿ**—ಏನೇ ಬರೆದಿರಲಿ, ಅದರಿಂದ ನಮಗೀಗ ಪ್ರಯೋಜನವೇನು?

**ಸುಧಾ**—ಅಂದರೆ?

**ತುಳಸಿ**—ಅಂದರೆ, ವಿವಾಹದ ಮೊದಲು ಗರ್ಭಿಣಿಯಾದ ನೀನು ಸಮಾಜದ ದೃಷ್ಟಿಯಲ್ಲಿ ದುರಾಚಾರಿಣಿ. ನಿನಗೆ ಮಾತ್ರವಲ್ಲ, ನಿನ್ನನ್ನು ಮನೆಯಿಂದ ಹೊರಡಿಸಿ ದೂರೀಕರಿಸದಿದ್ದರೆ ನಮ್ಮ ಇಡೀ ಕುಟುಂಬಕ್ಕೆ ಜಾತಿಬಹಿಷ್ಕಾರ ನಿಶ್ಚಯ.

**ಸುಧಾ**—ಅವರು ಇಂಗ್ಲೆಂಡಿನಿಂದ ಬಂದ ಕೂಡಲೇ ವಿವಾಹಮಾಡಿಕೊಂಡರಾಯಿತಲ್ಲವೇ?

**ತುಳಸಿ**—ಆಮೇಲೆ ನಿನಗೆ ವಿವಾಹಮಾಡುವವರಾದರೂ ಯಾರು?

**ಸುಧಾ**—ನಾವಿಬ್ಬರೇ ವಿವಾಹಮಾಡಿಕೊಂಡೇ ಸುಖವಾಗಿದ್ದರಾಯಿತು. ಮತ್ತೇನಾಗಬೇಕು?

**ತುಳಸಿ**—ಬಂಧುಬಳಗ, ಜಾತಿ ಮತವನ್ನೆಲ್ಲಾ ಬಿಟ್ಟು ನೀವಿಬ್ಬರೇ ಸುಖವಾಗಿರುವುದಾದರೂ ಹೇಗೆ?

**ಸುಧಾ**—ವಿವಾಹವೆಂಬುದು ಸ್ತ್ರೀ ಪುರುಷರಿಬ್ಬರ ಪ್ರೇಮಾನುಬಂಧವಲ್ಲವೇ? ಪರಸ್ಪರ ಪ್ರೇಮದಿಂದ ಇಬ್ಬರೂ ಒಂದುಗೂಡಿ ಸುಖವಾಗಿ ದಾಂಪತ್ಯ ಜೀವನ ನಡೆಸಿದರೆ ಸಮಾಜಕ್ಕಾಗಲೀ, ಬಂಧು ಬಳಗಕ್ಕಾಗಲಿ ಆಗುವ ಹಾನಿಯೇನು? ಅದರಲ್ಲಿ ಅನೀತಿಯೇನು? ಪ್ರೇಮದೆರಕವೇ ಪ್ರಾಮುಖ್ಯವಲ್ಲದೆ ಶುಷ್ಕ ವಿವಾಹ ವಿಧಿಯೇ?

**ತುಳಸಿ**—ನಿಂದೆಗಾಗಿಯೇ ಹೊಂಚು ಹಾಕಿಕೊಂಡಿರುವ ಜನವೃಂದದ ನಾಲಿಗೆಯು ನಿಮ್ಮಿಬ್ಬರ ಹೃದಯದೆರಕಕ್ಕೆ ಸೊಪ್ಪು ಹಾಕುವುದೇ ಸುಧಾ? ಕ್ಷಣಮಾತ್ರದ ಅವಿವೇಕದಿಂದ ನೀನು ನಿನ್ನ ಜೀವನವನ್ನೇ ಕೆಡಿಸಿಕೊಂಡಂತೆ ತೋರುತ್ತದೆ. ಮುಂದೇನು ಮಾಡುವುದೋ ನನಗೆ ತಿಳಿಯದು!

**ಸುಧಾ**—ಅಮ್ಮಾ, ನನ್ನ ಅವಿವೇಕವನ್ನು ನಾನೊಪ್ಪುವೆನು. ಆದರೆ ಆ ಪರಿಸ್ಥಿತಿಯಲ್ಲಿ ಹಾಗೆ ಮಾಡದೆ ನನಗೆ ನಿರ್ವಾಹವಿಲ್ಲದಾಯಿತು. ನನ್ನನ್ನು ಬಿಟ್ಟು ಇಂಗ್ಲೆಂಡಿಗೆ ತೆರಳಲಿದ್ದ ಅವರ ಅತ್ಯಾಗ್ರಹದಿಚ್ಛೆಯನ್ನು ನಾನು ಸಲಿಸದಿದ್ದರೆ ಅವರು ಸಿಟ್ಟಿನಿಂದೇನು ಮಾಡುವರೋ ಎಂಬ ಭೀತಿಯಿಂದ ತಲ್ಲಣಿಸಿ ವಿವೇಕಗೆಟ್ಟು ನಡೆದೆನಮ್ಮಾ. ತಪ್ಪಾಯಿತು, ತಪ್ಪಾಯಿತಮ್ಮಾ ಕ್ಷಮಿಸು. ಕಳೆದ ೨ ವರ್ಷಗಳಿಂದ ಅವರ ಸಂಪರ್ಕದಲ್ಲೇ ಕಠಿಣ ಮನೋನಿಗ್ರಹದಿಂದಿರಲಿಲ್ಲವೇ ನಾನು? ನವತಾರುಣ್ಯ ಪ್ರೇಮದ ಉತ್ತೇಜಕತೆಯಲ್ಲಿ, ಅವರ ಅಭಯದ ಒತ್ತಾಯದಲ್ಲಿ, ಹೃದಯವನ್ನೇ ಕಲಕಿ ಕರಗಿಸಿಬಿಡುವ ಪ್ರಣಯವಾಗ್ಝರಿಯ ಸೆಳೆತದಲ್ಲಿ ಅಚಲ ನಿಗ್ರಹದಿಂದಿರುವುದು ಅಸಾಧ್ಯವಾಯಿತಮ್ಮಾ ನನಗೆ! ಅದೊಂದು ವಿಶಿಷ್ಟ ಪರಿಸ್ಥಿತಿಯಲ್ಲಿ ನಾನು ಒಮ್ಮೆ ತಪ್ಪಿಬಿದ್ದೆನು. ಇನ್ನು ನನಗೆ ಗತಿಯೇ ಇಲ್ಲವೇ? ನಾನು ಸದಾ ದುರಾಚಾರಿಣಿಯೇ? ಅಮ್ಮಾ ಸಮಾಜದ ಮಾತಂತಿರಲಿ. ಹೆತ್ತ ಕರುಳಲ್ಲವೇ ನಿನ್ನದು? ನೀನೂ ಇಷ್ಟೊಂದು ನಿಷ್ಠುರಳಾಗುವುದೇ?

**ತುಳಸಿ**—( **ತುಂಬಿ ಬಂದ ಕಣ್ಣೀರೊರಸಿ**) ಮಗೂ, ನಾನು ನಿಷ್ಠುರಳೇ? ನೀನೆಷ್ಟು ನಿರ್ದೋಷಿಯೂ, ನಿರ್ಮಲಚರಿತಳೂ ಇರುವೆಯೆಂದು ನಾನರಿಯೆನೆ? ಆದರೆ, ಸುಧಾ, ಕಟುಕ ಸಮಾಜಕ್ಕೆ ಕನಿಕರದ ಹೃದಯವಾಗಲಿ, ಉದಾರ

ಮನಸ್ಸಾಗಲಿ ಇರುವುದೆ? ನೀನಿನ್ನು ಅವರ ದೃಷ್ಟಿಯಲ್ಲಿ ಸದಾ ಪತಿತೆ, ದುರಾಚಾರಿಣಿ, ಬಹಿಷ್ಕೃತೆ.

**ಸುಧಾ**—ಅಮ್ಮಾ, ಸಮಾಜದ ದೃಷ್ಟಿಯಲ್ಲಿ ನಾನು ಏನೇ ಆಗಿರಲಿ. ಹೆತ್ತ ಮಾತೆ ಮತ್ತು ಕೈಹಿಡಿದ ಪ್ರಾಣನಾಥನ ದೃಷ್ಟಿಯಲ್ಲಿ ನಿರ್ಮಲೆಯೆಂಬ ಸಮಾಧಾನವು ನನಗಿದ್ದರೆ ಸಾಲದೇ?

**ತುಳಸಿ**—ಸುಧಾ, ನಾನು, ನೀನು ಮತ್ತು ಪ್ರಭಾಕರ, ಈ ಮೂವರೇ ಆಗಿ, ಇತರರೊಡನೆ ಯಾವ ಸಂಬಂಧವೂ ಇಲ್ಲದೆ ಜೀವಿಸಲಾಗುವುದೇ? ಪ್ರತಿಯೊಂದು ವಿಷಯಕ್ಕೂ ನಾವು ಸಮಾಜದ ಮೇಲೆ ಹೊಂದಿಕೊಂಡಿರಬೇಕೆಂದ ಮೇಲೆ ನಾವು ಅದರ ಕಟ್ಟುಕಟ್ಟಳೆಗನುಸಾರವಾಗಿ ನಡೆಯಬೇಕಲ್ಲವೇ?

**ಸುಧಾ**—ಅಮ್ಮಾ, ಅವರು ಬಾರ್-ಎಟ್-ಲೋ ಕಲಿತು ಬಂದೊಡನೆಯೇ ನಾವು ಮೂವರೂ ಈ ಊರನ್ನೇ ಬಿಟ್ಟು ಎಲ್ಲಿಯಾದರೂ ದೂರ ಹೋಗಿ ವಾಸಿಸುವ. ಅವರು ವಕಾಲತಿನಿಂದ ನಮ್ಮ ಜೀವನ ನಿರ್ವಾಹಕ್ಕೆ ಬೇಕಷ್ಟು ಹಣ ಸಂಪಾದಿಸದಿರರು.

**ತುಳಸಿ**—ಅದೇನಾದರೂ ಮಾಡಬಹುದು ಸುಧಾ. ಆದರೆ ಆ ಮೊದಲೀಗ ಏನು ಮಾಡುವುದು?

**ಸುಧಾ**—ಯಾವುದಕ್ಕಮ್ಮಾ?

**ತುಳಸಿ**—ಜನ ನಿಂದೆಯನ್ನು ನಾವು ಸಹಿಸಿಕೊಂಡಿರುವುದಾದರೂ ಹೇಗೆ? ನಮ್ಮ ಕೆಲಸದ ಕೊರಗನು ಏನೋ ಒಂದು ಉಪಾಯ ಹೇಳಿದನು.

**ಸುಧಾ**—ಆ ಪ್ರಸ್ತಾಪ ನನ್ನೊಡನೆತ್ತಬಾರದಮ್ಮಾ. ನನ್ನ ಜನ್ಮದಲ್ಲಿ ಪ್ರಾಣ ಹೋದರೂ ಆ ರಾಕ್ಷಸೀ ಕೃತ್ಯಕ್ಕೆ ನಾನೆಂದಿಗೂ ಒಪ್ಪಲಾರೆನು. ಅದರಿಂದ ಪ್ರಯೋಜನವಾದರೂ ಏನಮ್ಮಾ?

**ತುಳಸಿ**—ಸಮಾಜವು ನಮ್ಮ ಮೇಲೆ ಬಹಿಷ್ಕಾರಹಾಕದಂತಾಗುವುದು.

**ಸುಧಾ**—ಅದು ಹೇಗೆ? ಈಗಲೇ ಜನರಲ್ಲೆಲ್ಲಾ ಸುದ್ದಿ ಹಬ್ಬಿರುವುದೆಂದಿಯಲ್ಲ ನೀನು?

**ತುಳಸಿ**—ಜನರೇನೆಂದರೂ ಬಹಿಷ್ಕಾರಕ್ಕೆ ತಕ್ಕ ರುಜುವಾತು ಬೇಕಲ್ಲವೇ?

**ಸುಧಾ**—ಬೇಡ ಬೇಡ, ಆತ್ಮದ್ರೋಹಮಾಡಿ, ಸಮಾಜದ ಕಣ್ಣಿಗೆ ಮಣ್ಣು ಹಾಕಿ, ಜಾತಿ ಬಹಿಷ್ಕಾರದಿಂದ ತಲೆ ತಪ್ಪಿಸಿ ಪಡೆವ ಜಾತಿಯೂ ಮಾನವೂ ನಮಗೆ ಬೇಡ.

**ತುಳಸಿ**—ಹಾಗಾದರೆ ನಮಗೆ ಜಾತಿ ಬಹಿಷ್ಕಾರ ನಿಶ್ಚಯ ಸುಧಾ.

**ಸುಧಾ**—ನನ್ನ ಜಾತಿ, ನೀತಿ, ಮಾನ, ಪ್ರಾಣವೆಲ್ಲವೂ ನನ್ನ ಪತಿ. ಸಮಾಜವು ಏನು ಬೇಕಾದರೂ ಮಾಡಲಿ, ಜನರು ಏನೇ ಆಡಿಕೊಳ್ಳಲಿ, ನನಗೇನು?

**ತುಳಸಿ**—ನಿನ್ನ ಪತಿಗಾಗಿಯೇ ನೀನಾ ಕೆಲಸ ಮಾಡಬೇಕಾಗಿದೆ.

**ಸುಧಾ**—ಇಲ್ಲ, ಇಲ್ಲ, ಅವರು ಸರ್ವಥಾ ಹಾಗೆ ಹೇಳಲಾರರು.

**ತುಳಸಿ**—ಅವನು ಹೇಳಿರುವನೆಂದುದಲ್ಲ ಸುಧಾ. ನಿನ್ನಮೇಲೆ ಸಮಾಜವು ಬಹಿಷ್ಕಾರ ಹಾಕಿ ನೀನು ಜಾತಿ ಭ್ರಷ್ಟಳೆಂದಾದರೆ ನಿನ್ನನ್ನು ಮದುವೆಯಾಗದಂತೆ ಪ್ರಭಾಕರನಿಗೆ ಮುಕುಂದ ರಾಯರು ದೊಡ್ಡ ಆತಂಕವನ್ನೊಡ್ಡುವರು. ಆಗ ಅವನು ಉಭಯ ಸಂಕಟದಲ್ಲಿ ಬಿದ್ದು ಏನುಮಾಡುವನೆಂದು ಹೇಳಬರುವುದಿಲ್ಲ. ಅದನ್ನು ನಿವಾರಿಸುವುದಕ್ಕಾಗಿ ನೀನಾ ಕೆಲಸಮಾಡಬೇಕೆಂದು ನಾನು ಸೂಚಿಸುವುದು.

**ಸುಧಾ**—ಅಮ್ಮಾ, ನಾನು ಅವರಿಗಾಗಿ ಯಾವ ತ್ಯಾಗವನ್ನಾದರೂ ಮಾಡಲು ಸಿದ್ಧಳಿರುವಾಗ, ಅವರು ನನಗಾಗಿ ಎಂತಹ ತ್ಯಾಗಕ್ಕಾದರೂ ತಯಾರಾಗದಿರುವರೇ?

**ತುಳಸಿ**—ಸ್ತ್ರೀಯರಷ್ಟು ತ್ಯಾಗಶೀಲರು ಪುರುಷರಲ್ಲ ಸುಧಾ.

**ಸುಧಾ**—ಅವರು ಎಲ್ಲ ಪುರುಷರಂತಲ್ಲಮ್ಮಾ.

**ತುಳಸಿ**—ಪ್ರತಿಯೋರ್ವ ಸ್ತ್ರೀಯೂ ಪ್ರಥಮದಲ್ಲಿ ತನ್ನ ಪ್ರಣಯಿಯು ಇತರರಂತಲ್ಲೆಂಬ ವಿಶ್ವಾಸ ಕಟ್ಟಿಕೊಳ್ಳುವಳು. ಆದರೆ ಪುರುಷರು ಅದಕ್ಕನುಸಾರವಾಗಿರುವುದು ಬಹಳ ಅಪರೂಪ.

**ಸುಧಾ**—ಅವರು ಈ ಅಪರೂಪಕ್ಕೆ ಸೇರಿದವರೇಕಾಗಬಾರದಮ್ಮಾ?

**ತುಳಸಿ**—ಅದೇ ನನಗೇಕೋ ಬಲು ಸಂದೇಹ.

**ಸುಧಾ**—ಅಮ್ಮಾ ನಾನೇನೆಂದರೂ ನಿನ್ನ ಸಂದೇಹವೇ ತೊಲಗದು. ಸಂಗತಿಯನ್ನೆಲ್ಲಾ ಅವರಿಗೇನೇ ತಿಳಿಸಿ, ಅವರ ಅಭಿಪ್ರಾಯದಂತೆಯೇ ನಡೆಯಲು ನೀನೊಪ್ಪುವೆಯಲ್ಲ?

**ತುಳಸಿ**—ಒಂದೊಮ್ಮೆ ಅವನೇ ಆ ಸೂಚನೆ ಮಾಡಿದರೆ ನೀನದಕೊಪ್ಪುವೆಯಲ್ಲನೇ?

**ಸುಧಾ**—ಅಮ್ಮಾ ನಿಶ್ಚಯವಾಗಿಯೂ ಒಪ್ಪುವೆನು. ಅವರಿಗಾಗಿ ನಾನು ಮಾಡದ ತ್ಯಾಗವಾದರೂ ಯಾವುದಿದೆ? ನಾನೀಗಲೆ ಅವರಿಗೆ ಕಾಗದ ಬರೆಯಲೇ?

**ತುಳಸಿ**—ಆಯ್ತು ಸುಧಾ, ಈಗಲೇ ಬರೆ.

**( ಸುಧೆಯು ಕಾಗದ ಬರೆಯ ತೊಡಗುವಳು)**

---

# ೬ನೇ ದೃಶ್ಯ—ಬೀದಿ

**[ಮುಕುಂದ ರಾಯನು ಮಂಗಳೂರಿನ ಉರ್ವ ಮೈದಾನಿನಲ್ಲೊಂದೆಡೆ ಅಮೃತ ರಾಯನನ್ನು ಕಾಯುತ್ತಾ ಅತ್ತಿತ್ತ ತಿರುಗಾಡುತ್ತಿರುವನು.]**

**ಮುಕುಂದ**—ಎಲ್ಲಿ ಹೋದನಪ್ಪ ಆ ಅಮೃತರಾಯ! ನಾನು 'ಎಡ್ವಾನ್ಸಾಗಿ' ಹಣಕೊಟ್ಟದ್ದೇ ತಪ್ಪಾಯಿತು. ಈಗಿನ ಯಾವ ಏಜೆಂಟರನ್ನಾದರೂ ನಂಬುವುದೇ ಕಷ್ಟವಾಯಿತಲ್ಲ! ಆದರೆ ಇವ ಹಾಗೆ ಮೋಸಮಾಡ್ಲಿಕ್ಕಿಲ್ಲೆಂದು ತೋರುತ್ತದೆ. ಅದು ಹೊರತು ನಾನೂ ಅವನಿಗೆ ಮುಂಗೈಗೆ ಬೆಲ್ಲ ತಾಗಿಸಿಟ್ಟಿದ್ದೇನೆ. ಕೆಲಸಮಾಡಿ ಕೊಟ್ಟರೆ ರೂ. 500 ಕೊಡುತ್ತೇನೆಂದು ಹೇಳಿದ್ದೇನೆ. ಆ ಆಶೆಗಾಗಿಯಾದರೂ ಬಾರದಿರಲಿಕ್ಕಿಲ್ಲ ನೋಡುವ. **(ಪುನಃ ಅತ್ತಿತ್ತ ತಿರುಗಾಡುವಾಗ ಅಮೃತರಾಯನು ಬರುವನು)**

**ಮುಕುಂದ**—ಅಮೃತ, ಏನಾಯಿತು? ಕೆಲಸವಾಯಿತೆ?

**ಅಮೃತ**—ಅವಳು ಕೋಣೆಯಿಂದ ಹೊರಬಂದರಲ್ಲವೆ ಕೆಲಸವಾಗುವ್ವುದು?

**ಮುಕುಂದ**—"ನಾನು ಪ್ರಭಾಕರನ ಆಪ್ತಮಿತ್ರ. ತುಂಬಿದ ಗರ್ಭಿಣಿ ಪ್ರಿಯತಮೆಯ ಭಾವಚಿತ್ರವೊಂದನ್ನು ತೆಗಿಸಿ ಇಂಗ್ಲೆಂಡಿಗೆ ಕಳುಹಿಸಬೇಕೆಂದು ನನಗೆ ಬರೆದಿದ್ದಾನೆ ಆತ" ಎಂದು ನೀನು ಹೇಳಲಿಲ್ಲವೇ?

**ಅಮೃತ**—ಹೇಳಿದೆ. ಏನು ಹೇಳಿದರೂ ಅವಳು ಕೇಳಬೇಕಲ್ಲವೇ?

**ಮುಕುಂದ**—ತುಳಸಿಯೊಡನೆ ಮಾತಾಡಲಿಲ್ಲವೇ?

**ಅಮೃತ**—ಅವಳು ಜುಗುಪ್ಸೆಗೊಂಡು ಸುಧೆಯನ್ನು ಅವಳಷ್ಟಕ್ಕೇನೇ ಬಿಟ್ಟಂತೆ ತೋರುತ್ತದೆ. ನಾನು ಹತ್ತು ಮಾತಾಡಿದರೆ ಅವಳೆಲ್ಲಿಯಾದರೂ ಒಂದು ಶಬ್ದ ಹೇಳುವುದು ಕಷ್ಟ.

**ಮುಕುಂದ**—ಹಾಗಾದರೆ ಸುಧೆಯ ಭಾವಚಿತ್ರ ಪಡೆಯಲು ಸಾಧ್ಯವೇ ಇಲ್ಲವೇ?

**ಅಮೃತ**—ಇಷ್ಟರವರೆಗೆ ಸಾಧ್ಯವಾಗಲಿಲ್ಲ. ನಿನ್ನೆಯ ವರೆಗೆ ಆ ವಿಷಯ ದಲ್ಲಿ ನಿರಾಶೆಗೊಂಡಿದ್ದೆ. ಆದರೆ ಈಗ ಸ್ವಲ್ಪ ಆಶೆಯುಂಟಾಗಿದೆ.

**ಮುಕುಂದ**—ಅದು ಹೇಗೆ ರಾಯರೆ?

**ಅಮೃತ**—ಸುಧೆಯು ಈಗ ಮನೆಯಲ್ಲಿಲ್ಲ.

**ಮುಕುಂದ**—ಮತ್ತೆಲ್ಲಿದ್ದಾಳೆ?

**ಅಮೃತ**—ಹೆಂಗುಸರ ಆಸ್ಪತ್ರೆಯಲ್ಲಿದ್ದಾಳೆ.

**ಮುಕುಂದ**—ಅಲ್ಲಿ ನಮ್ಮ ಕೆಲಸವಾಗುವುದು ಹ್ಯಾಗೆ?

**ಅಮೃತ**—ನೀವು ಅವಸರ ಮಾಡಬಾರದು. ಕೆಲದಿನ ಕಾಯಬೇಕು. ಕೂಡ್ಲೆ ಕೂಡ್ಲೆ ಕೆಲಸವಾಗುವುದೆಂದರೆ ಹ್ಯಾಗೆ?

**ಮುಕುಂದ**—ಎಷ್ಟು ದಿನ ಕಾಯುವುದು? "ಸುಧೆಯು ದುರಾಚಾರಿಣಿ, ಈಗ ಗರ್ಭಿಣಿಯಾಗಿದ್ದಾಳೆ. ವ್ಯಭಿಚಾರಿಣಿಯೆಂದು ನಿರ್ಧಾರವಾಗಿ ಅವಳ ಕುಟುಂಬದ ಮೇಲೆಯೇ ಜಾತಿ ಬಹಿಷ್ಕಾರ ಹಾಕಲಾಗಿದೆ. ತುಳಸಿಯ ಮನೆಯು ಅನೇಕ ದುರಾಚಾರಿ ತರುಣರ ಆಶ್ರಯವಾಗಿದೆ" ಎಂದು ನಾನು ಎಷ್ಟು ಬರೆದರೂ ಪ್ರಭಾಕರನು ನಂಬುವುದೇ ಇಲ್ಲ. ಇನ್ನು ಉಪಾಯ ದಿಂದಾದರೂ ಆತನನ್ನು ನಂಬುವಂತೆ ಮಾಡಲಾಗುವುದೋ ಎಂದು ನೋಡುವ ಆತುರ ಹಿಡಿದಿದೆ ನನಗೆ.

**ಅಮೃತ**—ಅವನೇನು ಬರೆದಿದ್ದಾನೆ ನಿಮಗೆ?

**ಮುಕುಂದ**—'ಸುಧೆಯು ಎಂಥವಳೇ ಇರಲಿ, ನಾನವಳ ಹೊರತು ಇತರ ರಾರನ್ನೂ ಎಷ್ಟು ಮಾತ್ರಕ್ಕೂ ಮದುವೆಯಾಗುವ ಹಾಗಿಲ್ಲ' ಎಂದು ನಿರ್ಧಾರ ಪೂರ್ವಕವಾಗಿ ಬರೆದಿರುತ್ತಾನೆ.

**ಅಮೃತ**—ಹಾಗಾದರೆ ನೀವೀ ಭಾವಚಿತ್ರವನ್ನು ತೆಗೆದುಕೊಂಡು ಮಾಡು ವುದೇನು?

**ಮುಕುಂದ**—ಭಾವಚಿತ್ರದಿಂದ ನನ್ನ ಕೆಲಸವಾಗುವುದೆಂಬ ವಿಶ್ವಾಸವು ನನಗಿದೆ.

**ಅಮೃತ**—ಹೇಗೆ?

**ಮುಕುಂದ**—ನೀವು ಕೆಲವು ತರುಣರು ಸುಧೆಯ ಒಟ್ಟಿರುವ ಭಾವಚಿತ್ರ ವೊಂದು ನನಗೆ ಹೇಗಾದರೂ ದೊರೆವಂತಾದರೆ ನನ್ನ ಕೆಲಸವಾಗುವುದು.

**ಅಮೃತ**—ಅದಕ್ಕೀಗ ಅಷ್ಟೊಂದು ಅವಸರವೇನು? ಸುಧೆಯು ಆಸ್ಪತ್ರೆ ಯಲ್ಲಿ ಹೆತ್ತಮೇಲೆ ಪ್ರಯತ್ನ ಮಾಡಿ ನೋಡಬಹುದು.

**ಮುಕುಂದ**—ಅವಸರವಿದೆ. ಹ್ಯಾಕೋರ್ಟು ಜಡ್ಜ ಯಶವಂತರಾಯರು ಪ್ರಭಾಕರನಿಗೆ ಅವರ ಮಗಳನ್ನು ಮಾತಾಡಿರುತ್ತಾರೆ. ಅವರಿಗೆ ನಾನು ಬೇಗನೆ ಉತ್ತರ ಕೊಡಬೇಕಾಗಿದೆ. ದೊಡ್ಡ ಮನುಷ್ಯರವರು. ಅದು ಹೊರತು ಅಂತಹ ನೆಂಟಸ್ತಿಕೆ ನಮಗೆ ಮತ್ತೊಂದು ಸಿಗಲಾರದು.

**ಅಮೃತ**—ಯಶವಂತರಾಯರ ಪುತ್ರಿ ಲೀಲಾವತಿಯನ್ನೇ?

**ಮುಕುಂದ**—ಹೌದು, ನಿಮಗೆ ಹೇಗೆ ಗೊತ್ತು ಅವಳ ಹೆಸರು?

**ಅಮೃತ**—ಅವಳು ಇಲ್ಲಿಯೇ ಎಫ್. ಎ. ವರೆಗೆ ಕಲಿತವಳಲ್ಲವೇ? ಬಹಳ ಹೆಸರು ಹೋದವಳು.

**ಮುಕುಂದ**—ಹಾಗೆಂದರೆ?

**ಅಮೃತ**—ಹ್ಯಾಕೋರ್ಟು ಜಡ್ಜರ ಮಗಳಲ್ಲವೇ? ಮೋಟರ್ ಕಾರಿನಲ್ಲಿ ಎಲ್ಲೆಲ್ಲಿಯೂ ಅಲೆದಾಡುತ್ತಿದ್ದಳು. ಅದೇ ಗೊತ್ತು ನನಗೆ. ಅದಂತಿರಲಿ ಮುಕುಂದರಾಯರೇ, ಅವಳಿಗಿಂತ ಪ್ರಭಾಕರನಿಗೆ ಸುಧೆಯನ್ನೇ, ಪಾಪ, ಮದುವೆ ಮಾಡಿದರಾಗದೇ? ಪ್ರಭಾಕರನಿಗೂ ಅವಳಿಗೂ ಮೊದಲಿಂದಲೂ ಸ್ನೇಹಾಚಾರ ವಿದ್ದು, ಅವನು ಅವಳ ಹೊರತು ಇನ್ನಾರನ್ನೂ ಮದುವೆಯಾಗೆನೆಂದಿರುವಾಗ ನಿಮಗೇನಪ್ಪ ಅದರಲ್ಲಿ?

**ಮುಕುಂದ**—ಹುಂ, ನನಗೇನಪ್ಪ ಅದರಲ್ಲಿ! ನನ್ನ ಮಗ ಆ ದುರಾಚಾರಿಣಿ ಯನ್ನು ಮದುವೆಯಾಗುವುದೇ?

**ಅಮೃತ**—ಅದಕ್ಕೆ ಪ್ರಭಾಕರನೇ ಕಾರಣನಲ್ಲವೇ?

**ಮುಕುಂದ**—ಏನು ಪ್ರಭಾಕರನು ಕಾರಣನೇ? ಸಾಕು ಸಾಕು, ನನ್ನೊಡನೆ ಆ ಮಾತೆಲ್ಲಾ ಬೇಡ! ಸುಲಭವಾಗಿ ಬಂಗಾರದಂತಹ ಹುಡುಗನೊಬ್ಬನ ತಲೆ ಕೆಡಿಸಿ ಬಗಲೊಳಗೆ ಹಾಕಿಬಿಡಬೇಕೆಂದು ಆ ತುಳಸಿ ಹೂಡಿದ ತಂತ್ರ ಈಗ ಅವಳಿಗೇನೇ ಬಡಿಯಿತು. ಈಗ ಚೆನ್ನಾಗಿ ಅನುಭವಿಸಲಿ ಅದರ ಫಲ!

**ಅಮೃತ**—ಹಾಗಾದರೆ ಪ್ರಭಾಕರನು ಆ ಲೀಲಾವತಿಯನ್ನೇ ಮದುವೆ ಯಾಗಬೇಕೆಂದೇನು? ಬೇರೆ ಹುಡುಗಿಯರಿಲ್ಲವೇ?

**ಮುಕುಂದ**—ಲೀಲಾವತಿಯಲ್ಲಿ ಕೊರತೆಯೇನು? ಬಹಳ ರೂಪವತಿ, ಬಿ. ಎ. ಕಲಿತವಳು. ಅದು ಹೊರತು ಯಶವಂತರಾಯರು, ರೂ. ೧೦,೦೦೦ ವರದಕ್ಷಿಣೆ ಮಾತ್ರವಲ್ಲದೆ ಪ್ರಭಾಕರನು 'ಬಾರ್-ಎಟ್-ಲೋ' ಕಲ್ತು ಬಂದೊಡನೆಯೇ ಸಬ್‌ಜಡ್ಜ್ ಕೆಲಸ ಕೂಡಾ ಕೊಡುತ್ತೇನೆಂದು ಮಾತುಕೊಟ್ಟಿದ್ದಾರೆ. ಇದಕ್ಕಿಂತ ಒಳ್ಳೇ ನೆಂಟಸ್ತಿಕೆ ಇನ್ನಾವುದು?

**ಅಮೃತ**—ನೆಂಟಸ್ತಿಕೆಯೇನೋ ಬಹಳ ಒಳ್ಳೇದು. ಆದರೆ........

**ಮುಕುಂದ**—ಸಾಕು, ಸಾಕು! ಆ ವಿಚಾರ ಕೇಳಲು ನಿನ್ನನ್ನು ನಾನು ಕರೆಯಿಸಿದುದಲ್ಲ. ನಾನು ಹೇಳಿಗ ಕೆಲಸ ಮಾಡಿಕೊಡುವಿಯೊ ಇಲ್ಲವೊ?

**ಅಮೃತ**—ಪಾಪ, ನಿರ್ದೋಷಿ ಹುಡುಗಿಯೊಬ್ಬಳ ಜೀವನವನ್ನೇ ಕೆಡಿಸುವ ಸಂಗತಿಯಲ್ಲವೇ ಮುಕುಂದರಾಯರೇ?

**ಮುಕುಂದ**—ಸಾಕು ನಿಮ್ಮ ಸಂಭಾವಿತತನವೆಲ್ಲ! ಇನ್ನೇನು ಕೆಡಿಸುವುದು ಕೆಟ್ಟು ಮೂರು ದಿನವಾದ ಮೇಲೆ?

**ಅಮೃತ**—ಅಲ್ಲ, ಒಂದು ವೇಳೆ ನಿಮ್ಮ ಮಗನು ಅವಳನ್ನೇ ಮದುವೆಯಾದರೆ ಅವಳ ಸುಖಕ್ಕೇನೂ ಕೊರತೆ ಬಾರದಲ್ಲವೇ? ಮತ್ತೇನಾಗಬೇಕವಳಿಗೆ? ಜಾತಿಗೆ ಬೆಂಕಿಹಾಕಲಿ. ಈಗ ಯಾರಿಗಿದೆ ಜಾತಿ?

**ಮುಕುಂದ**—ಏನು, ನನ್ನ ಮಗ ಆ ವ್ಯಭಿಚಾರಿಣಿಯನ್ನು ಮದುವೆಯಾಗುವುದೇ? ನಾನು ಪ್ರಾಣ ಮಾತ್ರದಿಂದಿರುವ ವರೆಗೆ ಅದು ಸಾಧ್ಯವೇ ಇಲ್ಲ. ಆ ತುಳಸಿ, ಮಾಡಿದ್ದನ್ನು ಎರಡೂ ಕೈಗಳಿಂದ ತಿನ್ನಬೇಕು! ಅವಳ ಮಗಳು ಬೀದಿ ಬೀದಿ ಅಲೆದು 'ಬಿಕ್ಷೆ' ಬೇಡುವಂತಾಗಬೇಕು!

**ಅಮೃತ**—ಒಂದು ಕಾಲದಲ್ಲಿ ತುಳಸಿಬಾಯಿಯವರು........

**ಮುಕುಂದ**—ನೀನೀಗ ನಾನು ಹೇಳಿದ ಕೆಲಸಮಾಡಿ ಕೊಡುವಿಯೋ ಇಲ್ಲವೋ ಖಂಡಿತ ಹೇಳು! ಈ ಒಣರಗಳೆಯೆಲ್ಲಾ ಯಾಕೆ ನಿನಗೆ? ನಿನ್ನಿಂದಾಗದಿದ್ದರೆ ನಾನು ಬೇರೆ ಯಾರನ್ನಾದರೂ ಹಿಡಿಯಬೇಕು.

**ಅಮೃತ**—ಈಗವಳು ಆಸ್ಪತ್ರೆಯಲ್ಲಿರುವುದರಿಂದ ಕೆಲಸವೇನೊ ಸುಲಭದಲ್ಲಿ ಆಗಬಹುದೆಂದು ಹೇಳುವ. ಆದರೆ ಯಾಕೆ ಪಾಪ ಅಂತ.

**ಮುಕುಂದ**—ಅಮೃತ, ನೀನೇ ಕೆಲಸ ಮಾಡಿಕೊಟ್ಟರೆ ನಿನಗೆ ರೂಪಾಯಿ ಐನೂರು ಕೊಡುವೆನೆಂದು ಹೇಳಿದುದನ್ನು ಮರೆತೆಯಾ?

**ಅಮೃತ**—(ಕೂಡಲೇ ಉತ್ಸಾಹಗೊಂಡು) ಖಂಡಿತವಾಗಿಯೂ ಕೊಡುವಿರಾ?

**ಮುಕುಂದ**—ನೀನು ಕೆಲವುಂದಿ ತರುಣರೊಂದಿಗಿರುವಂತೆ ಸುಧೆಯ ಭಾವ ಚಿತ್ರ ತಂದುಕೊಟ್ಟರೆ ಖಂಡಿತವಾಗಿಯೂ ೫೦೦ ರೂಪಾಯಿ ಕೊಡುತ್ತೇನೆ. ರೂಪಾಯಿ ೫೦೦ ಸಿಗದೆ ನೀನು ಭಾವಚಿತ್ರ ಕೊಡುವುದೇ ಬೇಡ.

**ಅಮೃತ**—ಹಾಗಾದರೆ ಭಾವಚಿತ್ರ ತಂದುಕೊಡುವುದು ನನಗೆ ಸಂದಿತು. ಆಸ್ಪತ್ರೆಯಲ್ಲಿ ನನ್ನ ಪರಿಚಯಸ್ಥರಿದ್ದಾರೆ. ಅಲ್ಲಿಯ ನರ್ಸೊಬ್ಬಳಿಗೂ ನನಗೂ ಸ್ನೇಹಾಚಾರವೂ ಇದೆ. ಆದರೆ ಸುಧೆಯು ಇಂದು ನಾಳೆ ಹೆರಬಹುದಂತೆ. ಆದುದರಿಂದ ಇನ್ನು ೧೫ ದಿವಸ ಯಾವ ಕೆಲಸವೂ ಆಗುವುದಿಲ್ಲ.

**ಮುಕುಂದ**—೧೫ ದಿವಸಗಳ ಮೇಲೆಯಾದರೂ ಭಾವಚಿತ್ರ ತೆಗಿಸಿಕೊಡುವುದು ನಿಶ್ಚಯವೇ?

**ಅಮೃತ**—ಅದು ನಿಶ್ಚಯ. ಆ ವಿಷಯದಲ್ಲಿ ನಿಮಗೆ ಸಂದೇಹವೇ ಬೇಡ. ಈಗ ಒಂದು ೧೫ ರೂಪಾಯಿಯಾದರೂ ಖರ್ಚಿಗೆ ಬೇಕು.

**ಮುಕುಂದ**—ಹದಿನೈದಲ್ಲ, ಇಪ್ಪತ್ತು ತೆಗೆದುಕೋ. ನಿನ್ನ ನಂಬಿಗೆ ನನಗಿದೆ. ಆದರೆ ನೀನು ಹೇಗೆ ಭಾವಚಿತ್ರ ತೆಗಿಸುವಿ?

**ಅಮೃತ**—ಯಾವ ನೆವದಿಂದಾದರೂ, ಕಡೆಗೆ ದಾಕ್ತರಳಿಗೆ ಲಂಚಕೊಟ್ಟಾದರೂ, ನಾನೂ ನನ್ನ ಮಿತ್ರ ನವೀನನೂ, ಸುಧೆಯ ಸಮೀಪನಿಂತು, ನಾನು ಅವಳಿಗೆ ಕಿತ್ತಳೆ ಹಣ್ಣು ಕೊಡುವಂತೆಯೂ, ನವೀನನು ಅವಳ ಮಗುವನ್ನು ನೋಡುವಂತೆಯೂ ನಟಿಸಿ ಭಾವಚಿತ್ರ ತೆಗಿಸಿತರುವ ಕೆಲಸ ನನ್ನದು. ಆ ಕುರಿತು ಇನ್ನು ನಿಮಗೆ ಯಾವ ಯೋಚನೆಯೂ ಬೇಡ.

**ಮುಕುಂದ**—ನೀನು ಮಾತುಕೊಟ್ಟೆಯೆಂದರೆ ತಪ್ಪುವುದಿದೆಯೇ? ಇಗೋ ಹಣ ತೆಗೆದುಕೊ (ರೂ. ೨೦ ಕೊಟ್ಟು) ಆದರೆ, ಆದಷ್ಟು ಬೇಗ ಕೆಲಸಮಾಡಬೇಕು. ಭಾವಚಿತ್ರ ಹಿಡಕೊಂಡು ಕಾಸರಗೋಡಿಗೇ ಬಾ.

**ಅಮೃತ**—ಆಯ್ತು ನಾನೀಗ ಹೋಗುತ್ತೇನೆ.

---

# ೭ನೇ ದೃಶ್ಯ—ಮನೆ

[ಸುಧೆಯು ಕೋಣೆಯೊಳಗೆ ಕೂತು, ಮುಕುಂದರಾಯನು ಬರೆದ ಕಾಗದವನ್ನು ಪ್ರಭಾಕರನ ಪತ್ರವೆಂದು ಅವಸರದಿಂದ ಒಡೆದೋದಿ ಕ್ರೋಧ ಸಂತಾಪಭರದಿಂದ ಅದನ್ನು ಚೂರು ಚೂರಾಗಿ ಹರಿದು ಬಿಸಾಡುವಳು. ಅನಂತರ ಮೇಜಿನ ಮೇಲೆ ಎಡ ಮುಂಗೈಯಿಟ್ಟು ಅಂಗೈಯ ಹೆಬ್ಬೆಟ್ಟು ಮತ್ತು ತೋರ್ಬೆಟ್ಟುಗಳೆಡೆಯಿಂದ ಹಣೆಯನ್ನೊತ್ತಿ ಹಿಡಿದು, ಸೆರಗಿಂದೊರಸಿದಷ್ಟೂ ಹರಿದು ಬರುವ ಕಣ್ಣೀರ ಧಾರೆಯನ್ನು ಸ್ವಚ್ಛಂದವಾಗಿ ಬಿಟ್ಟು ಸಂತಾಪದ ಪ್ರತಿಮೂರ್ತಿಯಾಗಿ ಕುರ್ಚಿಯ ಮೇಲೆ ಕುಳಿತಿರುವಳು. ತುಳಸಿಬಾಯಿಯು ಸುಧೆಯ ಕೋಣೆಗೆ ಪ್ರವೇಶಿಸುವಳು]

**ತುಳಸಿ**—ಸುಧಾ, ನಿನಗೆ ಕಣ್ಣೀರಿಡುವುದೊಂದೇ ಕೆಲಸವೇ? ಮಗು ಕೂಗಲಾರಂಭಿಸಿ ಅರ್ಧ ಗಂಟೆಯಾಯಿತು! ನೀನೇನು ಮಗುವನ್ನು ಮೊಲೆ ಕೊಡದೆ ಕೊಲ್ಲಬೇಕೆಂದಿರುವೆಯಾ?

**ಸುಧಾ**—ಅಮ್ಮಾ ಕ್ಷಮಿಸು, ನನಗೆ ಮಗು ಅಳುವುದು ಕೇಳಿಸಲೇ ಇಲ್ಲ.

**ತುಳಸಿ**—ಕೇಳುವುದೆಂದರೆ ಹೇಗೆ? ಕೋಣೆಯೊಳಗೆ ಕೂತು ಕಣ್ಣೀರು ಸುರಿಸುತ್ತಿರುವುದೊಂದೇ ನಿನಗೆ ಗೊತ್ತು. ಸುಧಾ, ನೀನು ಇದೇ ರೀತಿ ನಡೆದರೆ ಬದುಕುವುದಾದರೂ ಹೇಗೆ?

**ಸುಧಾ**—(ಒಮ್ಮೆಯೇ ಉಕ್ಕಿ ಹರಿದ ಕಣ್ಣೀರನ್ನು ಸೆರಗಿಂದೊರಸಿ ಗದ್ಗದ ಕಂಠಳಾಗಿ) ಅಮ್ಮಾ ನಾನಿನ್ನೂ ಬದುಕಿಕೊಂಡಿರಬೇಕೇ? (ಬಾಯ್ಬಿಟ್ಟು ಅಳುವಳು)

**ತುಳಸಿ**—(ಕಡೆಗಣ್ಣಲ್ಲಿ ತುಂಬಿ ಬಂದ ಕಣ್ಣೀರನ್ನು ಫಕ್ಕನೆ ಒರಸಿ) ಸುಧಾ.... (ರುದ್ಧಕಂಠಳಾಗಿ ಸುಮ್ಮನಾಗುವಳು.)

**ಸುಧಾ**—(ಹಠಾತ್ತಾಗಿ ತುಳಸಿಯ ಕಾಲಿಗೆ ಬಿದ್ದು ಪಾದಗಳನ್ನು ಗಟ್ಟಿಯಾಗಿ ಹಿಡಿದು) ಅಮ್ಮಾ, ನನಗಿನ್ನು ಗತಿಯಿಲ್ಲ! ನಾನಿನ್ನು ಭಿಕಾರಿಣಿ! ದುರಾಚಾರಿಣಿ!! ವ್ಯಭಿಚಾರಿಣಿ!!! ನೀನು ನನ್ನ ಯೋಚನೆ ಬಿಟ್ಟು ಮಾವನೊಂದಿಗೆ ಸುಖವಾಗಿರಮ್ಮಾ! ಈ ಪಾಪಿನಿಗೆ ಜನ್ಮವಿತ್ತು ನೀನು ಪಟ್ಟ ಸುಖ ಸಾಕು! ಇನ್ನಾದರೂ ನನ್ನನ್ನು ನನ್ನ ಪಾಡಿಗೆ ಬಿಟ್ಟು ನೀನು ನಿನ್ನ ಪಾಡು ನೋಡಮ್ಮಾ!

**ತುಳಸಿ**—(ಸುಧೆಯನ್ನೆತ್ತಿ) ಸುಧಾ, ನೀನೇನು ಚಿಕ್ಕ ಮಗುವೆ ಹೀಗೆ ಅಳುವುದಕ್ಕೆ? ನಿನಗಿಂದೇನಾಯಿತು? ಎಂತಹ ವಿಪತ್ತಿನಲ್ಲಿಯೂ ನನಗೆ ಧೈರ್ಯ ಹೇಳುತ್ತಿದ್ದ ನೀನೇ ಇಂದೀಗ ಧೃತಿಗೆಟ್ಟು ಈ ರೀತಿ ಹಲುಬಲು ಕಾರಣವೇನು?

**ಸುಧಾ**—ಕಾರಣವೇನೆನ್ನಲಮ್ಮಾ! ನನ್ನ ಜೀವನದ ಆಶಾತಂತುವು ಕಡಿಯಿತು. ಅಮ್ಮಾ ಇನ್ನು ನೀನು ನನ್ನ ಆಶೆಬಿಡು. ನಿನಗೆ ಮಗಳೇ ಹುಟ್ಟಿಲ್ಲವೆಂದು ಭಾವಿಸಿಕೋ. ಮಾವನೊಂದಿಗೆ ಸುಖವಾಗಿರು.

**ತುಳಸಿ**—ಏನೆಲ್ಲಾ ಮಾತಾಡುವೆ ಸುಧಾ? ನಾನು ನಿನ್ನನ್ನು ಬಿಟ್ಟುಹೋಗುವುದೇ? ನಿನ್ನ ಗತಿಯೇನು? ನಿನ್ನ ಎಳೆಗೂಸಿನ ಪಾಡೇನು?

**ಸುಧಾ**—ನಾನು ಪಾಪಿನಿ, ಕಳಂಕಿನಿ, ಹತಭಾಗಿನಿ. ನನ್ನ ಗತಿ ಇನ್ನೇನಾದರೇನು? ಪಾಪಿನಿಯ ಪಾಪಗರ್ಭದಲ್ಲಿ ಹುಟ್ಟುವ ಪಾಪಕ್ಕೊಳಗಾಗಿರುವ ನನ್ನ ಕೂಸಿನ ಪಾಡೇನಾದರೇನು?

**ತುಳಸಿ**—ಸುಧಾ, ಇದೇನು? ನೀನಿಂದು ಇಷ್ಟೊಂದು ನಿರಾಶೆಪಡಲು ಕಾರಣವೇನು?

**ಸುಧಾ**—ಅಮ್ಮಾ, ಇನ್ನೇನದರಲ್ಲಿ ಮುಚ್ಚುಮರೆ? ಅವರಿಗೆ ಇನ್ನೋರ್ವ ಹುಡುಗಿ ನಿಶ್ಚಯವಾಗಿದೆಯಂತೆ. ಅವರು ಇಂಗ್ಲೆಂಡಿನಿಂದ ಬಂದೊಡನೆಯೇ ವಿವಾಹವಾಗುವುದಂತೆ.

**ತುಳಸಿ**—ಸುಧಾ! ಸುಧಾ!! (**ಆವೇಗದಿಂದ ಮಾತಾಡಲಾರದೆ ಸುಮ್ಮನಾಗುವಳು**)

**ಸುಧಾ**—ಅಮ್ಮಾ, ಇಂದಿನವರೆಗೆ, ಎಷ್ಟೊಂದು ಹರಿದರೂ ಮತ್ತೂ ಒಸರುತ್ತಲೇ ಇದ್ದ ನನ್ನ ಕಣ್ಣೀರ ಬುಗ್ಗೆಯು ಈಗ ಒಮ್ಮೆಯೇ ಬತ್ತಿಹೋಗಿರುವುದು. ನನಗಿನ್ನು ಚಿಂತೆಯಿಲ್ಲ, ವ್ಯಥೆಯಿಲ್ಲ, ಸಂತಾಪವಿಲ್ಲ. ಇನ್ನು ನೀನೂ ದುಃಖಪಡಬಾರದಮ್ಮಾ!

**ತುಳಸಿ**—ಸುಧಾ, ನೀನಿನ್ನೇನು ಮಾಡುವೆ? ನಿನ್ನ ಮಗುವಿನ ಗತಿಯೇನು? (**ಕಣ್ಣೀರಿಡುವಳು.**)

**ಸುಧಾ**—(**ಸೆರಗಿಂದ ತುಳಸಿಯ ಕಣ್ಣೀರೊರಸಿ**) ಅಮ್ಮಾ, ಇನ್ನು ನೀನು ನನ್ನ ಮತ್ತು ಮಗುವಿನ ಯೋಚನೆಬಿಡು. ನೀನು ಮಾವನೊಂದಿಗೆ ಸುಖವಾಗಿರು.

**ತುಳಸಿ**—(**ಸೆರಗಿಂದ ಕಣ್ಣೀರೊರಸಿಕೊಂಡು**) ನಾನಿನ್ನು ಸುಖವಾಗಿರುವುದೇ? ನಿನ್ನನ್ನು ಬಿಟ್ಟು ಹೋಗುವುದೇ? ಕುಟುಂಬಿಕರು ದೂರೀಕರಿಸಿದರೂ, ಸಮಾಜವು ಬಹಿಷ್ಕರಿಸಿದರೂ, ಜನರು ನಾನಾಪರಿ ನಿಂದಿಸಿ ಭಂಗಿಸಿದರೂ, ನಿನ್ನನ್ನು ಬಿಟ್ಟು ಹೋಗಲೊಪ್ಪದ ಮಾತೃಹೃದಯವು ಇನ್ನು ಒಪ್ಪುವುದೆ ಮಗು? ಹೆತ್ತ ಕರುಳಲ್ಲವೆ ಅದು? ಒಮ್ಮೆಗೆ ಇಡೀ ಲೋಕವೇ ಮುನಿದು

ಬಿದ್ದರೂ, ಘೋರ ನರಕವೇ ದೊರೆಯುವುದಾದರೂ ಮಕ್ಕಳನ್ನದು ಕೈಬಿಡ ಬಲ್ಲುದೆ ಸುಧಾ?

**ಸುಧಾ**—ಕ್ಷಮಿಸಮ್ಮಾ ಕ್ಷಮಿಸು! (ಪುನಃ ಕಾಲ್ಗೆರಗಿ) ನಿನ್ನ ಹೃದಯದ ಪರಿಯನ್ನರಿಯದೆ, ಆಗಾಗಿನ ನಿನ್ನ ನಿಷ್ಠುರವಚನಗಳಿಂದ ನಿನ್ನ ಕುರಿತು ನಾನಾ ದುರಾಲೋಚನೆ ಮಾಡಿದ ನನ್ನನ್ನು ನೀನು ಕ್ಷಮಿಸಬೇಕಮ್ಮಾ! ನಿನ್ನ ಮಾತು ಕೇಳುತ್ತಿದ್ದರೆ ಈ ಅನರ್ಥವುಂಟಾಗುತ್ತಿದ್ದಿಲ್ಲ.

**ತುಳಸಿ**—(ಪುನಃ ಹಿಡಿದೆತ್ತಿ) ನಿನ್ನದೇನೂ ತಪ್ಪಿಲ್ಲ ಸುಧಾ. ನಿನ್ನಂತಹ ತರುಣಿಯರಾರಾದರೂ ಇದೇ ರೀತಿ ಮಾಡುತ್ತಿದ್ದರು. ತಪ್ಪು ನನ್ನದು. ಆ ಪ್ರಭಾಕರನ ಮಾತಿಗೆ ಮರುಳಾಗಿ ಅವನನ್ನು ನಿನ್ನ ಸಂಪರ್ಕದಿಂದಿರಬಿಟ್ಟುದೇ ನಾನು ಮಾಡಿದ ದೊಡ್ಡ ಅವಿವೇಕ.

**ಸುಧಾ**—ಅದಾರ ಅವಿವೇಕವೇ ಇರಲಮ್ಮಾ. ಆ ಕುರಿತಿನ್ನು ಮಾತಾಡಿ ಫಲವೇನು?

**ತುಳಸಿ**—ಸುಧಾ, ಪ್ರಭಾಕರನು ವಿಲಾಯಿತಿಯಿಂದ ಯಾವಾಗ ಬರುವನು? ಅವನು ಊರಿಗೆ ಬರುವುದಿಲ್ಲವೇ?

**ಸುಧಾ**—ಅವರು ಯಾವಾಗ ಬಂದರೆ ನಮಗೇನಮ್ಮಾ? ಅವರಿನ್ನು ಊರಿಗೆ ಬಂದರೇನು ಬಾರದಿದ್ದರೇನು?

**ತುಳಸಿ**—ಸುಧಾ, ಇದೆಲ್ಲಾ ಮುಕುಂದರಾಯರ ಕೆಲಸ. ಅವರು ಮೊದಲೇ ನಿನ್ನ ಮತ್ತು ಪ್ರಭಾಕರನ ವಿವಾಹಕ್ಕೆ ಬದ್ಧ ವಿರೋಧಿಯಿದ್ದರು. ನಮ್ಮನ್ನು ನಾನಾ ರೀತಿ ನಿಂದಿಸಿ ಹೀನೈಸುತ್ತಿದ್ದರು. ನೀನು ಇನ್ನೊಮ್ಮೆ ಪ್ರಭಾಕರನಿಗೆ ಪತ್ರಬರೆದು ನೋಡು. ಅವನು ಮುಕುಂದರಾಯರಂಥಲ್ಲ. ಒಳ್ಳೇ ಹುಡುಗ.

**ಸುಧಾ**—ಅವರು ಒಳ್ಳೆಯವರಾಗಲಿ ಕೆಟ್ಟವರಾಗಲಿ ನಾನಿನ್ನವರಿಗೆ ಕಾಗದ ಬರೆಯಲಾರೆನು.

**ತುಳಸಿ**—ಅದೇನು ಸುಧಾ?

**ಸುಧಾ**—ಅದೇನೆಂದು ನಿನಗೆ ತಿಳಿಯದೇ? ನಾನು ಕಳೆದ ೬ ತಿಂಗಳಿಂದ ಬರೆದ ಕಾಗದ ಎಷ್ಟಾದೀತಮ್ಮಾ? ಅದಕ್ಕೊಂದಕ್ಕಾದರೂ ಅವರ ಉತ್ತರ ವಿದೆಯೇ? ಇನ್ನೂ ನಾನವರಿಗೆ ಕಾಗದ ಬರೆಯುವುದೇ? ಎಂಥವಳಿಗಾದರೂ ಒಂದು ಅಭಿಮಾನವೆಂಬುದಿಲ್ಲವೇ?

**ತುಳಸಿ**—ಕಡೆಯ ಸಲ ಒಮ್ಮೆ ಬರೆದು ನೋಡು ಸುಧಾ. ಈಗ ವಿಪತ್ತಿಗೊಳಗಾಗಿರುವವರು ನಾವಲ್ಲವೇ? ನಮ್ಮ ಕೆಲಸವಾಗಬೇಕಾದರೆ ಎಂತಹ ತಿರಸ್ಕಾರ, ಅಪಮಾನಗಳನ್ನಾದರೂ ಧೈರ್ಯದಿಂದ ಸಹಿಸಿಕೊಳ್ಳಬೇಕಾಗುವುದು.

**ಸುಧಾ**—ನಾನಿನ್ನು ಅವರಿಗೆ ಎಷ್ಟುಮಾತ್ರಕ್ಕೂ ಕಾಗದ ಬರೆಯಲಾರೆನು.

**ತುಳಸಿ**—ನೀನು ಬರೆಯದಿದ್ದರೆ ನನ್ನ ಹೆಸರಲ್ಲಿ ಬರೆ. ಸಂಗತಿಗಳನ್ನೆಲ್ಲಾ ಸರಿಯಾಗಿ ತಿಳಿಸು. ಮಗುವಿನ ವಿಷಯವನ್ನೂ ಬರೆ.

**ಸುಧಾ**—ಎಲ್ಲವನ್ನೂ ಒಂದಲ್ಲ ೧೦ ಸಲ ಬರೆದಿರುವಾಗ ಇನ್ನೂ ಇನ್ನೂ ಬರೆಯುವುದರಿಂದೇನು ಫಲವಮ್ಮಾ? ಮಗುವಿನ 'ಫೋಟೋ' ಕೂಡಾ ಕಳುಹಿಸಿದುದಲ್ಲವೇ?

**ತುಳಸಿ**—ಅವನು ಯಾವಾಗ ಊರಿಗೆ ಬರುವನಂತೆ ಸುಧಾ? ಮುಕುಂದರಾಯರು ಏನೆಲ್ಲಾ ಬರೆದಿದ್ದಾರೆ? ಎಲ್ಲಿದೆ ಅವರ ಕಾಗದ ನೋಡುವ?

**ಸುಧಾ**—ಬೇಡವಮ್ಮಾ, ನೀನವರ ಕಾಗದವನ್ನೋದುವುದು ಬೇಡ. ನಾನೋದಿದುವೇ ಸಾಕು. ನಾನದನ್ನು ಆಕ್ಷಣ ಹರಿದು ಬಿಸಾಡಿರುವೆನು.

**ತುಳಸಿ**—ಅದರಲ್ಲವರು ಏನೇನು ಬರೆದಿರುವರೆಂದಾದರೂ ಹೇಳಬಾರದೆ ಸುಧಾ?

**ಸುಧಾ**—ಅಮ್ಮಾ, ಹೇಳಲೇ ಬೇಕೇ? ನೀನದನ್ನೆಲ್ಲಾ ಕೇಳಿ ತಾಳಿಕೊಳ್ಳಬಲ್ಲೆಯಾ?

**ತುಳಸಿ**—ಏನು ಹೇಳುವೆ ಸುಧಾ? ನೀನು ತಾಳಿಕೊಂಡಿರುವಾಗ ನಾನು ತಾಳಿಕೊಳ್ಳಲಾರೆನೆ? ನಿನ್ನ ಹೃದಯಕ್ಕಿಂತಲೂ ಮೃದುವಾದುದೆ ನನ್ನ ಹೃದಯ?

**ಸುಧಾ**—ಅಮ್ಮಾ, ನನ್ನ ಹೃದಯಕ್ಕಿನ್ನು ಅಸಹನೀಯವಾದ ಯಾತನೆಯು ಲೋಕದಲ್ಲಾವುದೂ ಇರಲಾರದು. ಮಗುವೊಂದಲ್ಲದಿರುತ್ತಿದ್ದರೆ .......

**ತುಳಸಿ**—ನಾಕು, ಸಾಕಾ ಮಾತು ಸುಧಾ. ಆ ನೀಚ ಮುಕುಂದನು ಏನೆಲ್ಲಾ ಬರೆದಿರುವನೆಂಬುದನ್ನು ತಿಳಿಸು.

**ಸುಧಾ**—ಅಮ್ಮಾ, ಅವರು ಇಂಗ್ಲೆಂಡಿನಿಂದ ಊರಿಗೇನೇ ಬಾರದೆ, ನೆಟ್ಟಗೆ ಮದ್ರಾಸಿಗೇನೇ ಹೋಗುವರಂತೆ. ಅಲ್ಲಿ, ಯಶವಂತರಾಯರ ಪುತ್ರಿ ಲೀಲಾವತಿಗೂ ಅವರಿಗೂ ಇದೇ ಬರುವ ಕ್ರಿಸ್‌ಮಸ್ ರಜೆಯಲ್ಲಿ ಮದುವೆಯಾಗುವು

ದಂತೆ. ಮಾನಗೆಟ್ಟು, ಸಮಾಜ ಬಹಿಷ್ಕೃತರಾಗಿರುವ ನಾವು ಇನ್ನೂ ಇನ್ನೂ ಅವರ ಮಗನನ್ನು ಮರುಳುಗೊಳಿಸಿ ವಶಮಾಡಿಕೊಳ್ಳುವ ಆಶೆ ಕಟ್ಟಿಕೊಂಡಿದ್ದರೆ ಆ ಭ್ರಾಂತಿಯನ್ನು ಇನ್ನಾದರೂ ಬಿಟ್ಟುಬಿಡಬೇಕಂತೆ. ಬುದ್ಧಿಹೀನ ತರುಣರ ತಲೆಗೆಡಿಸಿ ಮೋಸದಿಂದ ಅವರನ್ನು ತಮ್ಮ ಬಲೆಗೆಳೆವ ಮಾನ ಮರ್ಯಾದೆಯಿಲ್ಲದ ಸ್ತ್ರೀಯರ ಪಾಡೇನೆಂಬುದನ್ನು ಚೆನ್ನಾಗಿ ಮನಗಂಡುಕೊಳ್ಳಬೇಕಂತೆ.

**ತುಳಸಿ**—ಹಾ ನೀಚಾ! ನರಪಿಶಾಚಿ! ಎಂತಹ ಹೃದಯ ನಿನ್ನದು ದುರಾತ್ಮಾ! ಹಾ ಸುಧಾ! (**ದೀರ್ಘ ಶ್ವಾಸಬಿಟ್ಟು**) ಸುಧಾ!! ಸುಧಾ!!! (**ಬಿದ್ದು ಬಿಡುವಳು**)

**ಸುಧಾ**—ಅಮ್ಮಾ! ಅಮ್ಮಾ!! (**ತುಳಸಿಯು ಮೈಹಿಡಿದು ಕುಲುಕುವಳು. ತುಳಸಿಯು ನಿಶ್ಚೇತನಳಾಗಿರುವಳು**) ಅಯ್ಯೋ! ಅಮ್ಮಾ! ಅಮ್ಮಾ!! (**ಪುನಃ ಮೈ ಕುಲುಕಿ ತುಳಸಿಯು ಮತ್ತೂ ನಿಶ್ಚೇತನಳಾಗಿಯೆ ಇರುವುದನ್ನು ಕಂಡು ಗಾಬರಿಗೊಂಡು**) ಕೊರಗ! ಕೊರಗ!! ಕೊರಗ!!! ಸ್ವಲ್ಪ ನೀರು ತಾ. ಬೇಗ ತಾ. (**ಕೊರಗನು ಗಡಿಬಿಡಿಯಿಂದ ಒಂದು ಲೋಟೆಯಲ್ಲಿ ನೀರುತಕ್ಕೊಂಡು ಓಡಿಬರುವನು. ಸುಧೆಯು ತುಳಸಿಯ ಮುಖಕ್ಕೆ ನೀರುಚುಮುಕಿಸಿ ಸೆರಗಿಂದ ಒರಸುವಳು ತುಳಸಿಯು ಮೆಲ್ಲಗೆ ಕಣ್ಣು ತೆರೆಯುವಳು.**)

**ತುಳಸಿ**—(**ಮೆಲ್ಲಗೆ**) ಸುಧಾ!

**ಸುಧಾ**—ಅಮ್ಮಾ, ಮಾತಾಡಬೇಡ, ಸುಮ್ಮನಿರು. ಕೊರಗ, ಬಾ, ಇಲ್ಲಿ ಬಾ ನಾವಿಬ್ಬರೂ ಅಮ್ಮನನ್ನು ಹಿಡಿದು ಮಂಚದಲ್ಲಿ ಮಲಗಿಸುವ (**ಇಬ್ಬರೂ ತುಳಸಿಯನ್ನೆತ್ತಿ ಮಂಚದ ಮೇಲೆ ಮಲಗಿಸುವರು. ಸುಧೆಯು ಸೆರಗಿಂದ ತುಳಸಿಯ ಮುಖಕ್ಕೆ ಗಾಳಿ ಹಾಕುತ್ತಾ**) ಕೊರಗ, ಈಕ್ಷಣ ಓಡಿಹೋಗಿ ಡಾಕ್ಟರ್ ನರಸಿಂಗರಾಯರನ್ನು ಕರಕೊಂಡು ಬಾ. ಅಮ್ಮ ಒಮ್ಮೆಯೇ ಬೋಧತಪ್ಪಿ ಬಿದ್ದು ನಿಶ್ಚೇತನಳಾಗಿರುವಳೆಂದು ತಿಳಿಸು. ಹೋಗು. ಕೂಡಲೇ ಕರಕೊಂಡು ಬಾ, (**ಕೊರಗನು ಓಡಿಹೋಗುವನು. ಸುಧೆಯು ಉಕ್ಕಿ ಬರುವ ಕಣ್ಣೀರೊರಸಿಕೊಂಡು ಹಲಿಗೆಯ ಮೇಲಿರುವ ಲವಂಚದ ಬೀಸಣಿಗೆಯಿಂದ ತುಳಸಿಗೆ ಗಾಳಿಹಾಕುವಳು.**)

---

# ೮ನೇ ದೃಶ್ಯ—ಬೀದಿ

[ಮದ್ರಾಸಿನ ರೈಲ್ವೆ ಸ್ಟೇಶನಿನ ಬಳಿ ತಮ್ಮ ಮೋಟಾರು ಕಾರು ನಿಲ್ಲಿಸಿ ಯಶವಂತ ರಾವ್, ಮುಕುಂದ ರಾವ್, ಲೀಲಾ ಮತ್ತು ಡಾಕ್ಟರ್ ರಮಾನಾಥನ್ ಇವರು ನಿಲ್ದಾಣಕ್ಕೆ ಹೋಗಿ ಪ್ರಭಾಕರನನ್ನು ನಿರೀಕ್ಷಿಸಿ ಕೊಂಡಿರುವರು. ಆಗ ಬೊಂಬಾಯಿಯ ಮೆಯಿಲ್‌ಬರುವುದು, ಪ್ರಭಾಕರನು ಆಂಗ್ಲೇಯ ವೇಷಭೂಷಣಗಳಿಂದ ಕೈಯಲ್ಲೊಂದು ಬೆತ್ತ ಮತ್ತು ಬ್ಯಾಗ್ ಹಿಡಿದುಕೊಂಡು ಸೆಕೆಂಡ್ ಕ್ಲಾಸ್ ಕಂಪಾರ್ಟ್‌ಮೆಂಟಿನಿಂದ ಹೊರಬರುವನು. ಲೀಲಾವತಿಯು ಅವನ ಕೊರಳಿಗೆ ಹೂಮಾಲೆ ಹಾಕಿ ಶೇಕ್ ಹ್ಯಾಂಡ್‌ಮಾಡುವಳು ]

**ಯಶವಂತರಾವ್**—ಇವಳೇ ನಿಮ್ಮ ಮುಂದಿನ ಪತ್ನಿ, ಲೀಲಾ. ಕಮೊನ್ ಡಾಕ್ಟರ್ ರಮಾನಾಥನ್! ಇವರು ಲೀಲೆಯ ಆಪ್ತಮಿತ್ರರು. (ಡಾಕ್ಟರ್ ರಮಾನಾಥನರೂ ಪ್ರಭಾಕರನಿಗೆ ಹೂಮಾಲೆ ಹಾಕಿ ಶೇಕ್ ಹೇಂಡ್ ಮಾಡುವರು.)

**ಮುಕುಂದ**—(ಆನಂದಾತಿಶಯದಿಂದ ನಿಂತಲ್ಲಿ ನಿಲ್ಲದೆ) ಮಗು! ಪ್ರಭಾಕರ, ಎಲ್ಲಾ ಕ್ಷೇಮವಲ್ಲ? ರೈಲೇನು ಇಷ್ಟೊಂದು ತಡವಾದುದು? ನಾವೆಷ್ಟು ಕಾದುದು? ನೋಡು, ಇವರೇ ನಿನ್ನ ಮುಂದಿನ ಮಾವ ಸರ್ ಯಶವಂತರಾಯರು. ಮದ್ರಾಸ್ ಹೈಕೋರ್ಟಿನ ಜಡ್ಜರು.

**ಪ್ರಭಾಕರ**—(ನಾಚಿಕೆಯಿಂದ ಏನು ಮಾತನಾಡುವುದೆಂದು ತಿಳಿಯದೆ ಸುಮ್ಮನೆ ನಿಲ್ಲುವನು.)

**ಯಶವಂತರಾವ್**—ನೀವು ಬಹಳ ದಣಿದಿರುವಂತೆ ತೋರುತ್ತದೆ.

**ಪ್ರಭಾಕರ**—(ಒಣ ನಗೆ ಬೀರಿ) ಇಲ್ಲ ಇಲ್ಲ. ನಾನೇನೂ ದಣಿದಿಲ್ಲ.

**ಮುಕುಂದ**—ಚಿಕ್ಕಂದಿನಿಂದಲೂ ಅವನಿಗೆ ಸ್ವಲ್ಪ ನಾಚಿಕೆ ಹೆಚ್ಚು. ಯಶವಂತರಾಯರೆ! ಇಂಗ್ಲೆಂಡಿಗೆ ಹೋದರೂ ನಾಚಿಕೆ ಹೋಗಲಿಲ್ಲವೆಂತಕಾಣುತ್ತದೆ.

**ಲೀಲಾ**—(ಸ್ವಗತ) ಇಂಗ್ಲೆಂಡಿಗೆ ಹೋದವರಿಗೆ ನಾಚಿಕೆಯೆ? ಇದೆಲ್ಲಾ ನಟನೆ! ಅಲ್ಲಿಯ ಲೇಡಿಗಳಿದಿರಲ್ಲಿ ಯಾವ ನಾಚಿಕೆಯಾದರೂ ಉಳಿಯುವುದುಂಟೇ?

**ಯಶವಂತ**—ನಾವು ಸುಮ್ಮನೇಕೆ ಇಲ್ಲಿ ನಿಂತು ಮಾತನಾಡುವುದು? ಮನೆಗೆ ಹೋಗುವ ಮುಕುಂದರಾಯರೇ.

**ಮುಕುಂದ**—ಆಯಿತು. ಹೋಗುವ. ಬಾ. ಪ್ರಭಾಕರ. (ಎಲ್ಲರೂ ಹೋಗುವರು)

# ೯ನೇ ದೃಶ್ಯ—ಉದ್ಯಾನ

[ಪ್ರಭಾಕರ ಮತ್ತು ಲೀಲಾವತಿಯರು ಕೈ ಕೈ ಹಿಡಿದುಕೊಂಡು ಪ್ರವೇಶಿಸಿ ಉದ್ಯಾನದ ಸೀಟೊಂದರಲ್ಲಿ ಕುಳಿತುಕೊಳ್ಳುವರು. ಆಗ ಲೀಲಾವತಿಯು ದಾರಿಯಲ್ಲಿ ತಕ್ಕೊಂಡ 'ಹಿಂದು' ಪತ್ರಿಕೆಯನ್ನು ತೆಗೆದು]

**ಲೀಲಾ**—ನೋಡಿ ನೋಡಿ, ಇವತ್ತಿನ 'ಹಿಂದು'ವಿನಲ್ಲಿ ನಮ್ಮ ವಿವಾಹ ನಿಶ್ಚಯದ ವರ್ತಮಾನ ಪ್ರಕಟವಾಗಿರಬೇಕು. ನೋಡುವ. (ಪತ್ರಿಕೆಯನ್ನು ತೆರೆದು ನೋಡುತ್ತಾ) ನೋಡಿ ಇಲ್ಲಿ ನೋಡಿ, ನಾನು ರೈಲ್ವೇ ಸ್ಟೇಶನಿನಲ್ಲಿ ನಿಮ್ಮ ಕುತ್ತಿಗೆಗೆ ಹೂಮಾಲೆ ಹಾಕಿದ 'ಫೊಟೋ' ಪ್ರಕಟವಾಗಿದೆ. (ಪ್ರಭಾಕರನು ನೋಡಿ ಕೃತಕ ನಗೆ ಬೀರುವನು. ಲೀಲಾವತಿಯು ಫೊಟೋವನ್ನು ಮತ್ತೂ ಮತ್ತೂ ನೋಡಿ) ನಾನೂ ಪಪ್ಪನೂ ಇಂಗ್ಲೆಂಡಿಗೆ ಬಂದು, ಅಲ್ಲಿ ನಿಮ್ಮನ್ನು ಸಂಧಿಸಿ, ನಿಮ್ಮೊಂದಿಗೇ ಫ್ರಾನ್ಸ್, ಇಟಲಿ ಮೊದಲಾದ ದೇಶಗಳನ್ನು ಕಂಡು ಹಿಂದೆ ಬರಬೇಕೆಂದಿದ್ದೆವು.

**ಪ್ರಭಾಕರ**--ಮತ್ತೇಕೆ ಬರಲಿಲ್ಲ?

**ಲೀಲಾ**—ಪಪ್ಪನಿಗೆ ಫಕ್ಕನೆ ರಜೆ ಸಿಗಲಿಲ್ಲ. ಅಷ್ಟರಲ್ಲಿ ನೀವು ಹೊರಟಿರೆಂದು ನಿಮ್ಮ ತಂದೆಯವರು ತಂತಿಬಿಟ್ಟು ತಿಳಿಸಿದರು. ಇನ್ನು ಮುಂದಾದರೂ ಒಮ್ಮೆ ನಾವೆಲ್ಲ ಇಂಗ್ಲೆಂಡಿಗೆ ಹೋಗಲೇಬೇಕು. ನೀವು ಈಗ ತಾನೆ ಇಂಗ್ಲೆಂಡಿನಿಂದ ಬಂದವರಾದರೂ ಆ ಕುರಿತು ಒಂದು ಸಂಗತಿ ಕೂಡಾ ಹೇಳುವುದಿಲ್ಲವಲ್ಲ? ನಾನು ಹೋಗಿದ್ದರೆ........

**ಪ್ರಭಾಕರ**—ಇಂಗ್ಲೆಂಡಿನ ಕುರಿತು ಅಲ್ಲಿಗೆ ಹೋಗಿಬಂದಿರುವ ನನಗಿಂತಲೂ ಹೋಗದಿರುವ ನಿನಗೇನೇ ಹೆಚ್ಚು ಗೊತ್ತಿರುವಾಗ ನಾನಿನ್ನು ಹೇಳುವುದೇನು? (ಮುಗುಳು ನಗೆ ಬೀರುವನು)

**ಲೀಲಾ**—ಸಾಕು ತಮಾಷೆಯೆಲ್ಲ ನಿಮ್ಮದು! (ಪ್ರಭಾಕರನ ಬಲಭುಜಕ್ಕೆ ತಟ್ಟಿ ಭರದಿಂದ ದೂಡಿಬಿಡುವಳು.)

**ಪ್ರಭಾಕರ**—(ಉರುಳಿ ಫಕ್ಕನೆ ಎದ್ದು ದೂರ ಸರಿದು ನಿಂತು ಕರವಸ್ತ್ರದಿಂದ ಅಂಗಿ ಇಜಾರುಗಳನ್ನು ಒರಸುತ್ತಾ) ಛೆ! ಇದೇನು ಹುಡುಗಾಟಿಕೆ ನಿನ್ನದು?

**ಲೀಲಾ**—ಹುಡುಗಾಟಿಕೆಯೋ? (ಜಗ್ಗನೆದ್ದು ಪ್ರಭಾಕರನ ಕುತ್ತಿಗೆ ಹಿಡಿದು ಜೋತಾಡುವಳು)

**ಪ್ರಭಾಕರ**—(ನಾಚಿ) ಛಿ! ಛೀ! ಬಿಡುಬಿಡು. (ಕೈಗಳನ್ನು ಬಿಡಿಸಲೆತ್ನಿಸುವನು)

**ಲೀಲಾ**—ಏನು, ಛಿ ಛಿ? (ಹೀಯಾಳಿಸಿ ಬಲಗಲ್ಲ ಹಿಡಿದು ಚಿವುಟಿ) ಹೋಗಿ ಅತ್ತ! ನೀವು ಮತ್ತೆ ಇಂಗ್ಲೆಂಡಿಗೆ ಹೋದವರಂತೆ! (ಹೆಬ್ಬೆಟ್ಟಿನಿಂದ ಗಡ್ಡತುದಿಯನ್ನೊತ್ತಿ ದೂಡಿಬಿಡುವಳು)

**ಪ್ರಭಾಕರ**—ಇಂಗ್ಲೆಂಡಿಗೆ ಹೋದರೇನು?

**ಲೀಲಾ**—ಇಂಗ್ಲೆಂಡಿಗೆ ಹೋದರೇನು? ಬೇಡ ಬೇಡ ನನ್ನೊಡನೆಲ್ಲ ಆ ಕಣ್ಣು ಕಟ್ಟು! ನೀವು ಎಷ್ಟು ಇಂಗ್ಲಿಷ್ ಹುಡುಗಿಯರನ್ನು ಚುಂಬಿಸಿರುವಿರೋ ಏನೋ? (ಒಮ್ಮೆಯೇ ಬಿಗಿದಪ್ಪಿ ಚುಂಬಿಸಿಬಿಡುವಳು)

**ಪ್ರಭಾಕರ**—(ಲೀಲಾವತಿಯು ಹಿಡಿತದಿಂದ ಬಿಡಿಸಿಕೊಂಡು ತಲೆಕೊಡಹಿ ಕಣ್ಣು ಕೆರಳಿಸಿ ಸುತ್ತಲೂ ನೋಡಿ) ನಿನಗೊಂದಿಷ್ಟು ಲಜ್ಜೆಯಿಲ್ಲವೇ?

**ಲೀಲಾ**—ಏನು ಲಜ್ಜೆಯೇ? ಕತ್ತಲೆಯಾದುದು ತೋರುವುದಿಲ್ಲವೇ? ಸಾಕು ಸಾಕು ಸಂಭಾವಿತತನದ ನಟನೆಯೆಲ್ಲಾ! ಇಲ್ಲಿ ನಮ್ಮನ್ನಾರೂ ನೋಡುವವರಿಲ್ಲ. ಒಂದೊಮ್ಮೆ ನೋಡಿದರೂ ಚಿಂತೆಯಿಲ್ಲ.

**ಪ್ರಭಾಕರ**—(ಏನು ಹೇಳುವುದೆಂದು ತೋರದೆ ಅತ್ತಿತ್ತ ನೋಡಿ) ಅದೋ ಅಲ್ಲಾರು ಕುಳಿತಿರುವುದು?

**ಲೀಲಾ**—(ಗಹಗಹಿಸಿ ನಕ್ಕು) ಅಲ್ಲಾರು ಕುಳಿತಿರುವುದು! ನಮ್ಮಂತೆಯೇ ಇಬ್ಬರು. ಇಲ್ಲಿ ಬರುವವರೆಲ್ಲಾ ಅಂಥವರೇ. ನಾನು ನಿಮ್ಮನ್ನು ಕರಕೊಂಡು ಬಂದುದೂ ಅದಕ್ಕೆ.

**ಪ್ರಭಾಕರ**—(ವಾಚು ನೋಡಿ) ಘಂಟೆ ಎಂಟಾಗುತ್ತಾ ಬಂತು, ತಡವಾಗುವುದಿಲ್ಲವೇ? ಮನೆಗೆ ಹೋಗುವ.

**ಲೀಲಾ**—(ಪುನಃ ಗಟ್ಟಿಯಾಗಿ ನಕ್ಕು) ಮನೆಗೆ ಹೋಗುವುದೇ? ಮನೆಗೆಹೋಗಿ ಈಗ ಮಾಡುವುದೇನು? ತಂದೆಯವರು ಕ್ಲಬ್ಬಿನಿಂದ ಬರುವುದು ೧೧ ಘಂಟೆಗೆ.

**ಪ್ರಭಾಕರ**—ನನ್ನ ತಂದೆಯವರಿಲ್ಲವೇ?

**ಲೀಲಾ**—ಅವರೇ? ಒಂದೆಡೆ ಚುಟ್ಟಾ ಎಳೆಯುತ್ತಾ ಪೇಪರ್ ಹಿಡಿದು ಕೂತುಬಿಟ್ಟರೆ ಮಧ್ಯರಾತ್ರಿಯಾದುದೂ ತಿಳಿಯದವರಿಗೆ. ನಿಮಗೇನಿಷ್ಟು ಅವಸರ?

**ಪ್ರಭಾಕರ**—ಮತ್ತಿಲ್ಲೇನು ಮಾಡುವುದು?

**ಲೀಲಾ**—ಇಲ್ಲೇನುಮಾಡುವುದೇ? ನೀವೇಕಿಷ್ಟು ಗಡಿಬಿಡಿಯಾಗಿರುವುದು?

ನಿಮ್ಮ ನಟನೆಗೊಂದು ಪರಿಮಿತಿಯಿಲ್ಲವೇ? ಇಲ್ಲಿ ಇನ್ನು ಮುಂದೆಯೇ ಇರುವುದು ಸ್ವಾರಸ್ಯ.

**ಪ್ರಭಾಕರ**—ಅದೇನಾ ಸ್ವಾರಸ್ಯ?

**ಲೀಲಾ**—(**ಪೊದೆಯ ಮರೆಯಲ್ಲಿ ಚುಂಬಿಸಿಕೊಂಡಿರುವ ದಂಪತಿಗಳ ಕಡೆಗೆ ಬೆಟ್ಟು ತೋರಿಸಿ ಮೆಲ್ಲಗೆ**) ನೋಡಿ, ನೋಡಿ, ಆಕಡೆ ನೋಡಿ ಸ್ವಾರಸ್ಯ! ವಾಚು ನೋಡಿ! ಎಷ್ಟು ನಿಮಿಷ ಈ ಸ್ವಾರಸ್ಯ ನಡೆಯುವುದೆಂದು ಲೆಕ್ಕಮಾಡಿ! ನೀವೇನೋ ಒಂದಿಷ್ಟು ಚುಂಬಿಸಿ ಬಿಟ್ಟಾಕ್ಷಣ ಗಡಿಬಿಡಿಯಾಗಿ ಬಿಟ್ಟಿರಲ್ಲ?

**ಪ್ರಭಾಕರ**—ನನಗಾ ಅಭ್ಯಾಸವಿಲ್ಲ.

**ಲೀಲಾ**—ಏನು! ಅಭ್ಯಾಸವಿಲ್ಲವೇ? ನಿಮ್ಮ ಸಂಭಾವಿತತನದ ತಿರುಳನ್ನು ನಾನು ತಿಳಿಯೆನೆಂದು ಭಾವಿಸಿದಿರಾ?

**ಪ್ರಭಾಕರ**—ಏನು?

**ಲೀಲಾ**—ಆ ವ್ಯಭಿಚಾರಿಣಿ ಸುಧೆಯೊಂದಿಗೆ........

**ಪ್ರಭಾಕರ**—(**ಒಮ್ಮೆಯೇ ಚಕಿತನಾದವನಂತಾಗಿ ಏನು ಮಾಡುವುದೆಂದು ತಿಳಿಯದೆ ತಲೆಬಾಗಿಸಿ ಬೂಟ್ಸಿನ ತುದಿಯಿಂದ ಹೊಯಿಗೆಯಲ್ಲಿ ಗೆರೆಎಳೆಯುತ್ತಾ ನಿಲ್ಲುವನು**)

**ಲೀಲಾ**—(**ಕರವಸ್ತ್ರದಿಂದ ಪ್ರಭಾಕರನ ಮುಖ ಒರಸಿ ಚುಂಬಿಸಿ**) ಆ ಕುರಿತು ನೀವು ಸ್ವಲ್ಪವೂ ಸಂತಾಪಗೊಳ್ಳಬೇಕಾಗಿಲ್ಲ ಪ್ರಿಯ. ಏನೋ ಮನೋದೌರ್ಬಲ್ಯದಿಂದ ಒಮ್ಮೆ ನೀವು ಆ ದುರಾಚಾರಿಣಿಯ ಬಲೆಗೆ ಬಿದ್ದಿರಬಹುದು. ಅದರಲ್ಲಿ ನನಗೇನೂ ಬೇಸರವಿಲ್ಲ. ನಿಮ್ಮಾಣೆ ಬೇಸರವಿಲ್ಲ. (**ಪ್ರಭಾಕರನು ಮತ್ತೂ ಖಿನ್ನನಾಗಿಯೇ ಇರುವನು**) ತಂದೆಯಾಣೆ ಬೇಸರವಿಲ್ಲ. ಪ್ರಿಯ! ನಾನಾ ಪ್ರಸ್ತಾಪವೆತ್ತಿದುದಕ್ಕಾಗಿ ಕ್ಷಮಿಸಿರಿ. ಇನ್ನು ಎಂದಾದರೂ ನಾನು ಆ ಸುದ್ದಿಯೆತ್ತಿದರೆ ದೇವರ ಆಣೆಯಿದೆ. (**ಪ್ರಭಾಕರನು ಮತ್ತೂ ನಿಶ್ಚಲನಾಗಿಯೇ ನಿಂತು ಬಿಡುವನು. ಆತನ ಕಂಗಳಿಂದ ಅಶ್ರುಬಿಂದುಗಳು ಹೊರಬೀಳುವವು.**) ಅಯ್ಯೋ, ಏನಾಯಿತು ನಿಮಗೆ? ನಾನೇಕೆ ಆ ನೀಚಳ ಮಾತೆತ್ತಿದೆ! (**ಪ್ರಭಾಕರನ ಕಣ್ಣೀರೊರಸುವಳು.**)

**ಪ್ರಭಾಕರ**—ಏನಿಲ್ಲ, ಏನಿಲ್ಲ. ನೀನೇನೂ ಕಾತರಗೊಳ್ಳಬೇಕಾಗಿಲ್ಲ. ಅದೇನೋ ಒಂದು ಯೋಚನೆಯು ಹಠಾತ್ತಾಗಿ ನನ್ನ ಮನಸ್ಸನ್ನಾಕ್ರಮಿಸಿ ಎದೆ ಕರಗಿಸಿತು.

**ಲೀಲಾ**—(ಮತ್ತಷ್ಟು ಕಾತರಪಟ್ಟು) ಅದಾವ ಯೋಚನೆ ಪ್ರಿಯ? ಆ ಭಿಕಾರಿಣಿಯ ಸಂಗತಿಯಲ್ಲವೇ? ಅವಳೀಗ ಸಂಪೂರ್ಣ 'ಬೇವರ್ಸಿ'ಯಾಗಿ ಹೋಗಿರುವಳೆಂದು ಮಾವ ಹೇಳಿದರು.

**ಪ್ರಭಾಕರ**—ಆಗಿರಬಹುದು. ಆದರೆ....(ಸಿಟ್ಟು ಸಿರಿಟ್ಟು ಸುಮ್ಮನಾಗುವನು.)

**ಲೀಲಾ**—ಆದರೆ ಏನು? ಹೇಳಬಾರದೆ?

**ಪ್ರಭಾಕರ**—ಏನು ಹೇಳಲಿ ಪ್ರಿಯೆ? ನಿಮಗೆಲ್ಲಾ ಗೊತ್ತಿರುವ ವಿಷಯವೇ ಅದು. ಸುಧೆಯು ಹಾಗಾಗುವಳೆಂದು........

**ಲೀಲಾ**—ಬಿಡಿ, ಆ ಸೂಳೆ ಸುಧೆಯ ಸುದ್ದಿ ಬಿಟ್ಟುಬಿಡಿ ಇನ್ನು. ಅವಳ ತಾಯಿಯೇ ಕೆಟ್ಟ ಚರ್ಯೆಯವಳಂತೆ. ತಾಯಿಯಂತೆ ಮಗಳಾದಳು, ಅದರಲ್ಲೇನು? ನೀವೇನೋ ಸತ್ಯಂಭಟ್ಟರಾಗಿ ಅವರ ಬಲೆಗೆ ಬಿದ್ದಿರಿ.

**ಪ್ರಭಾಕರ**—ಹೌದು, ಇನ್ನೇಕಾ ವಿಚಾರ ನನಗೆ! ಅವರು ಹೇಗಿದ್ದರೇನು? ಏನು ಮಾಡಿದರೇನು?

**ಲೀಲಾ**—ಪ್ರಿಯ, ಚಂದ್ರೋದಯವಾಗುತ್ತಿರುವುದು. ಚಂದ್ರಕಿರಣ ಚುಂಬನೋಲ್ಲಾಸದಿಂದ ನಲಿವ ತರಂಗಗಳ ಮನೋರಂಜನೆಯು ನಿಜವಾಗಿಯೂ ವಿವರಣಾತೀತವು. ಆದರೆ ನಿಮ್ಮಲ್ಲೀಗ ಅದನ್ನನುಭವಿಸಿ ಉತ್ಸಾಹಗೊಳ್ಳುವ ಹೃದಯವಿರುವಂತೆ ತೋರುವುದಿಲ್ಲ. ನಾವೀಗ 'ಎಕ್ಸೇರಿಯಮ್ ರೆಸ್ಟೋರೆಂಟಿಗೆ' ಹೋಗಿ ಒಂದೊಂದು ಕಪ್ ಕಾಫಿ ಕುಡಿದು ಮನೆಗೆ ಹೋಗುವ.

**ಪ್ರಭಾಕರ**—ಅದೇಕೆ ಹಾಗೆನ್ನುವೆ ಪ್ರಿಯೆ? (**ಮುಂದಹಾಸಬೀರಿ ಲೀಲಾವತಿಯನ್ನು ಹಿಡಿದು ಚುಂಬಿಸುವನು.**)

**ಲೀಲಾ**—(**ಅಕ್ಕುಲ್ಲಾಸಗೊಂಡು**) ಗೊತ್ತದು ನನಗೆ ಇದೆಲ್ಲಾ ನಟನೆಯೆಂದು! ಚುಂಬನಾಕಲೆಯನ್ನು ಚೆನ್ನಾಗಿ ಅಭ್ಯಾಸಿಸಿ ವಿಚಕ್ಷಣರಿರುವಿರಿ ನೀವು!

**ಪ್ರಭಾಕರ**—(**ನಸುನಕ್ಕು**) ಸ್ವಾಭಾವಿಕ ಪ್ರೇರಣೆಗೊಂದು ಅಭ್ಯಾಸಬೇಕೇ ಪ್ರಿಯೆ? ಹಾಗಾದರೆ ನಿನಗಾರು ಕಲಿಸಿದವರು? ಮೊದಲು ನನ್ನನ್ನು ಬಂಧಿಸಿ ಚುಂಬಿಸಿದವಳು ನೀನಲ್ಲವೇ?

**ಲೀಲಾ**—(**ಪೆಟ್ಟುಹೊಡೆವಂತೆ ಮೃದು ಹಸ್ತದಿಂದ ಕೆನ್ನೆಯನ್ನು ಸವರಿ**) ನೋಡಿ ನಿಮಗೆ ತಪ್ಪಿ ಮಾತಾಡಿದರೆ! (**ಸಿಟ್ಟಿನ ನಟನೆಯಿಂದ ಜೋಲುಮೋರೆ ಹಾಕಿ ಸ್ವಲ್ಪ ದೂರ ಸರಿದು ಕುಳಿತುಬಿಡುವಳು.**)

ಲೀ

**ಪ್ರಭಾಕರ**—ಹಾಗಾದರೆ ನೀನು ಒಬ್ಬಳೇ ಇಲ್ಲಿ ಕುಳಿತುಕೊಂಡಿರು. ನಾನು ಹೋಗುವೆನು. (ಹೋಗಲನುವಾಗುವನು)

**ಲೀಲಾ**—ಹೋಗಿ ಹೋಗಿ, ನನಗೇನೂ ಹೆದರಿಕೆಯಾಗುವುದಿಲ್ಲ. ನಾನೇನೂ ಪ್ರಥಮ ಸಲ........(ಫಕ್ಕನೆ ನಿಲ್ಲಿಸಿ) ಅಲ್ಲ, ನೀವು ಹೋಗುವುದಾದರೂ ಹೇಗೆ? ಮೋಟರ್‌ಕಾರು ನಡಿಸುವವರಾರು? ಇಂಗ್ಲೆಂಡಿಗೆ ಹೋದವರಂತೆ ಮತ್ತೆ! (ಎದ್ದು ಬಂದು ಪ್ರಭಾಕರನ ರಟ್ಟೆ ಹಿಡಿದು ಕಾರಿನ ಕಡೆಗೆ ಎಳೆದೊಯ್ಯಲೆತ್ನಿಸುವಳು )

**ಪ್ರಭಾಕರ**—(ಚಲಿಸದೆ ಗಟ್ಟಿಯಾಗಿ ನಿಂತು) ಏನು? ನೀನು ಈ ಮೊದಲೂ ಇಲ್ಲಿಗೆ ಬಂದು ಹೆಚ್ಚು ರಾತ್ರಿ ಕಳೆಯುತ್ತಿದ್ದೆಯಾ? ಯಾರೊಂದಿಗೆ?

**ಲೀಲಾ**—(ಕೃತಕ ನಗೆಬೀರಿ) ಒಹೋ, ಈಗಲೆ ಏಳಲಾರಂಭಿಸಿತೆ ಮತ್ಸರದ ಕಿಡಿ? ಇನ್ನೂ ಮದುವೆಯಾಗಲಿಲ್ಲವಲ್ಲ!

**ಪ್ರಭಾಕರ**—ಮದುವೆಯಾಗದವರು ಇಚ್ಛಾನುಸಾರವಿರಬಹುದೇ?

**ಲೀಲಾ**—(ಹಠಾತ್ತಾಗಿ ಉಗ್ರಕೋಪ ನಟಿಸಿ) ಏನೆಂದಿರಿ? ಇಚ್ಛಾನುಸಾರ ನಡೆದುದಾರು? ಏನು, ಗಂಡಸಾದವನಿಗೆ ಹೆಂಗಸಿನ ಕುರಿತು ಏನು ಹೇಳುವುದಕ್ಕೂ ಹಕ್ಕಿರುವುದೆಂದೇ?

**ಪ್ರಭಾಕರ**—ಅದೇಕಿಷ್ಟು ಸಿಟ್ಟುಗೊಳ್ಳುವೆ? ನೀನು ಇಚ್ಛಾನುಸಾರವಿದ್ದವಳೆಂದು ಯಾರು ಹೇಳಿದರು?

**ಲೀಲಾ**—ನೀವು!

**ಪ್ರಭಾಕರ**—ನಾನು! ಈ ಮೊದಲೂ ಇಲ್ಲಿಗೆ ಬಂದು ರಾತ್ರಿ ಹೆಚ್ಚು ಹೊತ್ತು ಕಳೆಯುತ್ತಿದ್ದೆನೆಂದು ನೀನೇ ಹೇಳಿದ್ದಲ್ಲವೇ? ಯಾರೊಂದಿಗೆಂದು ಕೇಳಿದ್ದು ನನ್ನದು ತಪ್ಪೆ? ಹಾಗಾದರೆ ಕ್ಷಮಿಸು.

**ಲೀಲಾ**—ಕ್ಷ— ಮಿ —ಸು! ಅಹಹ! ಎಷ್ಟು ಚಂದವಾಗಿ ಮಾತಾಡುತ್ತೀರಿ! ಒಮ್ಮೊಮ್ಮೆ ತಂದೆಯವರು ಕ್ಲಬ್ಬಿಗೆ ಹೋಗದಿದ್ದಾಗ ನಾವು ಇಲ್ಲಿ ಬಂದು ೯—೧೦ ಘಂಟೆ ರಾತ್ರಿವರೇಗೂ ಕೂತುಕೊಳ್ಳುತ್ತಿದ್ದೆವೆಂದು ಹೇಳಿದ್ದಷ್ಟೆ ನಾನು.

**ಪ್ರಭಾಕರ**—ಹಾಗೆಂದು ಈಗ ಹೇಳುವುದು.

**ಲೀಲಾ**—ಈಗಲೂ ಆಗಲೂ ಹೇಳಿದ್ದು ಅದನ್ನೆ. ಸಾಕಿನ್ನಾಮಾತು. ಈಗ ತಡವಾಗುವುದಿಲ್ಲವೇ? ಹೋಗುವ. (ಪುನಃ ಕೈ ಹಿಡಿದು ಎಳೆದೊಯ್ಯುವಳು.)

# ೧೦ನೇ ದೃಶ್ಯ—ಮನೆ

[ರಾತ್ರಿ ಸುಮಾರು ೮ ಘಂಟೆ ಸಮಯಕ್ಕೆ ತುಳಸಿಬಾಯಿಯ ಮನೆಯ ನಡುವಿನ ಕೋಣೆಯಲ್ಲಿ ಸುಧೆಯೂ ಮನೆಗೆಲಸದ ಸುಮಾರು ೪೦ ವರ್ಷ ಪ್ರಾಯದ ಕೊರಗನೂ ಕುಳಿತು ಮಾತಾಡುತ್ತಿರುವರು. ಹತ್ತಿರದಲ್ಲೇ ಸುಧೆಯ ಕೂಸು ತೊಟ್ಟಿಲಲ್ಲಿ ಮಲಗಿರುವದು.]

**ಸುಧಾ**—(ತಲೆಬಾಗಿ ಕಣ್ಣೀರಿಡುತ್ತಿದ್ದವಳು ಒಮ್ಮೆಯೇ ಗಟ್ಟಿ ಮನಸ್ಸುಮಾಡಿ ನೆಟ್ಟಗೆ ಕೊರಗನ ಮುಖ ನೋಡಿ) ಕೊರಗ, ಅಮ್ಮ ಮೃತಳಾದಂದಿನಿಂದ ನೀನೇ ನನ್ನ ತಾಯಿತಂದೆಯಾಗಿ, ರಾತ್ರಿ ಹಗಲು ನನ್ನ ಮತ್ತು ಮಗುವಿನ ಸೇವೆ ಮಾಡಿದ ನಿನ್ನ ಋಣವನ್ನು ಎಂದು ತೀರಿಸಲಿ! (ತುಂಬಿಬಂದ ಕಣ್ಣೀರನ್ನು ಸೆರಗಿಂದೊರಸಿಕೊಳ್ಳುವಳು.)

**ಕೊರಗ**—ಎಂತಹ ಋಣವಮ್ಮಾ ನನ್ನದು? ನಿಮ್ಮ ಚಾಕರಿಯವನಲ್ಲವೇ ನಾನು?

**ಸುಧಾ**—ನೀನಲ್ಲದಿದ್ದರೆ ನನ್ನ ಅವಸ್ಥೆಯೇನಾಗುತ್ತಿತ್ತೋ? ನನಗಾ ಪುಂಡರು ಎಂತಹ ಪೀಡೆ ಕೊಡುತ್ತಿದ್ದರೋ? ವ್ಯಭಿಚಾರಿಣಿಯಲ್ಲವೇ ನಾನು? ಸಮಾಜದಲ್ಲಿ ಮಾನವಂತ ಜೀವನ ನಡಿಸಲು ನನಗಾವ ಹಕ್ಕಿರುವುದು?

**ಕೊರಗ**—ಅಮ್ಮಾ ಹಾಗೆ ಮಾತಾಡಬೇಡಿ. ನೀವು ನಿಜವಾಗಿಯೂ ಮಾನವಂತೆಯಿರುವಿರಿ. ಆ ದುರಾಚಾರಿಗಳು ಏನು ಬೇಕಾದರೂ ಮಾಡಲಿ, ಜನರು ಏನೇ ಹೇಳಲಿ, ನಿಮ್ಮ ಹೃದಯವು ಪರಿಶುದ್ಧವಿರುವುದಮ್ಮಾ. ನೀವು ಬಹಳ ಒಳ್ಳೇಯವರಿರುವಿರಿ.

**ಸುಧಾ**—ಸಾಕು ಕೊರಗ, ನನ್ನ ಹೊಗಳಿಕೆ ಸಾಕು. ನೀನೆಂತಹ ಉಪಕಾರಮಾಡಿರುವೆಯೆಂದು ನಾನು ಚೆನ್ನಾಗಿ ಬಲ್ಲೆ. ಆ ವಿಷಯವಂತಿರಲಿ. ನನಗಿನ್ನು ಮುಂದೆ ಇಲ್ಲಿರಲು ಸಾಧ್ಯವಿಲ್ಲ. ನೀನು ನನಗಾಗಿ ಎಷ್ಟು ಮಂದಿಯೊಡನೆಲ್ಲಾ ನಿಷ್ಠುರ ಕಟ್ಟಿಕೊಳ್ಳಬೇಕಾಯಿತು!

**ಕೊರಗ**—ಹಾಗೆ ಮಾತಾಡಬಾರದಮ್ಮಾ ನೀವು.

**ಸುಧಾ**—ಆದರೆ ನಾನು ವ್ಯಭಿಚಾರಿಣಿಯಲ್ಲವೇ? ಶೂದ್ರ ಚಾಂಡಾಲರಿಗಿಂತಲೂ ನೀಚಳಲ್ಲವೇ?

**ಕೊರಗ**—ಛಿ, ಛಿ, ವ್ಯಭಿಚಾರಿಣಿ ಯಾರಮ್ಮಾ? ನೀವು ಯಾವಾಗಲೂ ಹೀಗೆ ನಿಮ್ಮನ್ನು ತುಚ್ಛೀಕರಿಸಿಕೊಳ್ಳುವುದು ಯಾಕಮ್ಮ?

**ಸುಧಾ**—ಕೊರಗ, ನಾನು ನನ್ನನ್ನು ತುಚ್ಛೀಕರಿಸಿಕೊಳ್ಳುವುದೇ? ಸಮಾಜವು ನನ್ನನ್ನು ತುಚ್ಛೀಕರಿಸಿ ದೂರೀಕರಿಸುವುದೇ? ನನಗೆ ಮುಖವೆತ್ತಿ ಹೊರ ಹೋಗಲಿದೆಯೇ? 'ವ್ಯಭಿಚಾರಿಣಿ' ಎಂಬ ಲಾಂಛನವನ್ನು ಸಮಾಜವು ನನ್ನ ಹಣೆಗೆ ಹಚ್ಚಿ ಮೆರೆದಾಡಿಸುವುದಿಲ್ಲವೇ? ನನ್ನ ಬಂಧುಬಳಗವು ನನ್ನನ್ನು ಕುಷ್ಠರೋಗಿಗಿಂತಲೂ ಕಳತೆಯಾಗಿ ಕಂಡು ನನ್ನ ಸಂಪರ್ಕ ಸಂಬಂಧವನ್ನೆಲ್ಲಾ ಕಡಿದು ಬಿಟ್ಟಿರುವುದಿಲ್ಲವೇ?

**ಕೊರಗ**—ಎಂತಹ ಕ್ರೂರ ಮನಸ್ಸಿನವರಪ್ಪಾ ಆ ಮುಕುಂದ ರಾಯರು? ಪ್ರಭಾಕರರಾಯರು ಇಲ್ಲಿರುವಾಗ ಎಷ್ಟು .......

**ಸುಧಾ**—ಇನ್ನಾ ಮಾತು ಬಿಡು. ನನಗೀಲೋಕದಲ್ಲಿ ನಿನ್ನ ಹೊರತು ಇನ್ನಾವ ಬಂಧುಬಳಗವೂ ಇಲ್ಲ. ನನ್ನಂತರ್ಯವನ್ನು ತಿಳಿದು ನನ್ನನ್ನು ಅತ್ಯಂತ ಪ್ರೇಮದಿಂದ ಕಂಡ ನಿಮ್ಮ ಜಾತಿ ನೀತಿಗೇನೇ ಸೇರಿದವಳು ನಾನು. ನಾನಿನ್ನು ಇಲ್ಲಿರಲಾರೆನು. (ಕಣ್ಣೀರಿಡುವಳು. ಕೊರಗನೂ ತಲೆಬಾಗಿಸಿ ಕಣ್ಣೀರಿಡುವನು. ಸುಧೆಯು ಪುನಃ ಮನಸ್ಸನ್ನು ಬಿಗಿಹಿಡಿದು) ಕೊರಗ, ನಾನಿಲ್ಲಿಂದ ಹೋಗುವ ನಿರ್ಧಾರ ಮಾಡಿರುವೆನು.

**ಕೊರಗ**—ಕೂಡದಮ್ಮಾ ಕೂಡದು! ನೀವೆಲ್ಲಿ ಹೋಗುವುದು ಒಬ್ಬರೇ? ಈ ಚಿಕ್ಕ ಮಗುವನ್ನೇನು ಮಾಡುವಿರಿ?

**ಸುಧಾ**—ಮಗುವನ್ನೂ ನನ್ನೊಂದಿಗೆ ಒಯ್ಯುವೆನು.

**ಕೊರಗ**—ಅಯ್ಯೋ, ಆಗದಮ್ಮಾ ಆಗದು! ಹಸುಗೂಸಿನತ್ತ ನೋಡಿಯಾದರೂ ನೀವು ಇಲ್ಲಿಂದ ಎಂದಿಗೂ ಹೋಗಬಾರದು.

**ಸುಧಾ**—ಮಗುವಿನ ಹಿತದ ದೃಷ್ಟಿಯಿಂದಲೇ ನಾನು ಈ ಊರು ಬಿಟ್ಟು ಎಲ್ಲಿಗಾದರೂ ಹೋಗಬೇಕಾಗಿದೆ. ಇಲ್ಲಿದ್ದರೆ ಅದು ವ್ಯಭಿಚಾರಿಣಿಯ ಮಗುವಾಗಿಯೇ ಬೆಳೆಯಬೇಕಾಗುವುದು. ನಾನು ಚೆನ್ನಾಗಿ ವಿಚಾರಿಸಿಯೇ ಈ ನಿರ್ಧಾರ ಮಾಡಿರುವೆನು.

**ಕೊರಗ**—ನೀವು ಹೋಗಬಾರದಮ್ಮಾ ನನ್ನನ್ನು ಬಿಟ್ಟು.

**ಸುಧಾ**—ನಿನ್ನನ್ನು ಬಿಟ್ಟು ಹೋಗಲು ನನಗೂ ಮನಸ್ಸೊಪ್ಪುವುದಿಲ್ಲ.

ಆದರೆ ನಿರ್ವಾಹವಿಲ್ಲ ಹೋಗದೆ. ಎಲ್ಲಿ ಹೋದರೂ ನಾನು ನಿನ್ನ ಪ್ರೇಮವನ್ನು ಮರೆಯಲಾರೆನು.

**ಕೊರಗ**—ಅಮ್ಮಾ ಪ್ರಭಾಕರರಾಯರು ವಿಲಾಯಿತಿಯಿಂದ ಬಂದಿರುವರಂತೆ. ನನಗವರ ಪರಿಚಯವಿರುವುದಮ್ಮಾ ಅವರಲ್ಲಿರುವಾಗ ನಾನವರ ವಸ್ತ್ರ ಒಗೆದು ಕೊಡುತ್ತಿದ್ದೆ ಬಿಸಿನೀರು ಕಾಯಿಸಿ ಕೊಡುತ್ತಿದ್ದೆ. ಅವರ ಮನೆಗೆ ಹೋಗಿ ನಾನೊಮ್ಮೆ ಮಾತಾಡಿ ಬರಲಮ್ಮಾ? ಒಳ್ಳೆಯರವರು, ನನ್ನ ಮಾತು ಕೇಳಿಯಾರು.

**ಸುಧಾ**—ವೃಥಾ ನೀನೇಕೆ ಹೋಗುವುದು? ವಿಲಾಯಿತಿಯಿಂದ ಬಂದು ಮದುವೆಯೂ ಆಗಿಹೋಗಿದೆ ಅವರಿಗೆ ಮದ್ರಾಸಿನಲ್ಲಿ. ಇನ್ನು ಮಾಡುವುದೇನು?

**ಕೊರಗ**—ಅಹ! ಮದುವೆಯಾಗಿಯೂ ಹೋಯಿತೇ? ಎಂತಹ ಅನ್ಯಾಯವಿದು? ನಾನೆಂದೂ ನೆನಸಲಿಲ್ಲ ಪ್ರಭಾಕರರಾಯರು ಇಷ್ಟು ಕೆಟ್ಟವರೆಂದು. ಆದರೆ ಅವರ ತಂದೆ ಬಹಳ ಕೆಟ್ಟವರು. ಎಲ್ಲಾ ಮಾಡಿದ್ದು ಅವರೇ.

**ಸುಧಾ**—ಒಳ್ಳೆಯವರಿರಲಿ ಕೆಟ್ಟವರಿರಲಿ ನಮಗೇನಿನ್ನು? ಬಿಡು ಆ ಮಾತು. ಈ ಮನೆಯ ಸಾಮಾನುಗಳನ್ನೆಲ್ಲಾ ನಾನು ನಿನಗೆ ಕೊಟ್ಟು ಹೋಗುವೆನು. ನನಗಾವುದೂ ಬೇಡ.

**ಕೊರಗ**—ನನಗೇಕಪ್ಪಾ ಈ ಸಾಮಾನುಗಳೆಲ್ಲಾ! ನಾನೇನು ಮಾಡುವುದು ಅವನ್ನೆಲ್ಲಾ? ನನಗೇನೂ ಬೇಡಮ್ಮ. ನೀವೇ ಕೊಂಡುಹೋಗಿ. ಇಲ್ಲವಾದರೆ ಯಾರಿಗಾದರೂ ಮಾರಿಬಿಡಿರಿ.

**ಸುಧಾ**—ನಾನು ಯಾರಿಗೂ ತಿಳಿಯದಂತೆ ಈ ಊರುಬಿಟ್ಟು ಹೋಗಬೇಕಾಗಿದೆ. ಆದುದರಿಂದ ಈ ಸಾಮಾನುಗಳನ್ನೆಲ್ಲಾ ನೀನೇ ನಿನ್ನ ಮನೆಗೊಯ್ದಿಟ್ಟು ಸಾವಕಾಶವಾಗಿ ಬೇಕಾದವರಿಗೆ ಮಾರಿಕೊಳ್ಳು.

**ಕೊರಗ**—(ಉದ್ವೇಗಗೊಂಡು, ಅದೆಂದಿಗೂ ಆಗದಮ್ಮಾ! ನನಗೆ ನಿಮ್ಮ ಯಾವ ಸಾಮಾನೂ ಬೇಕಾಗಿಲ್ಲ. ನಾನು ನೀವೆಲ್ಲಿ ಹೋಗುವಿರೋ ಅಲ್ಲಿಗೇನೇ ಬರುವೆನು. ನನಗಿಲ್ಲಿ ಮನೆಮಾರು ಮಕ್ಕಳುಮರಿಗಳೇನೂ ಇಲ್ಲ. ಎಲ್ಲಿ ಹೋದರೂ ಕೂಲಿ ಕೆಲಸಮಾಡಿ ಜೀವನ ನಡಿಸುವುದು. ಅಂದಮೇಲೆ ನಿಮ್ಮೊಂದಿಗೇನೇ ಬರಲು ನನಗಾವ ತೊಂದರೆಯೂ ಇಲ್ಲ.

**ಸುಧಾ**—(ವಿಸ್ಮಯಗೊಂಡು)ಇದೇನುಮಾತು ಕೊರಗ? ನೀನೆಲ್ಲಿಗೆ ಬರುವುದು?

**ಕೊರಗ**—ನೀವು ಹೋಗುವಲ್ಲಿಗೆ.

**ಸುಧಾ**—ನಾನೆಲ್ಲಿ ಹೋಗುವುದೆಂದು ನನಗೇನೇ ತಿಳಿಯದು.

**ಕೊರಗ**—ಅಮ್ಮಾ, ನಿಮಗೆ ಲೋಕಾನುಭವವಿಲ್ಲ. ನಡು ಯೌವನದಲ್ಲಿ ಈ ಹಸುಗೂಸನ್ನು ಕಟ್ಟಿಕೊಂಡು ನೀವು ಹೊರಹೋದಿರೆಂದರೆ ಹೆಜ್ಜೆ ಹೆಜ್ಜೆಗೂ ಅಪಾಯ ತಪ್ಪದು ನಿಮಗೆ. ಆದುದರಿಂದ ನಿಮ್ಮೊಂದಿಗೇನೇ ನಾನೂ ಬರುವೆನು. ತುಳಸಿಯಮ್ಮ ಸಾಯುವಾಗ, "ಕೊರಗ, ನೀನು ಸುಧೆಯನ್ನೆಂದಿಗೂ ಬಿಟ್ಟುಹಾಕಬೇಡ; ಅವಳಿಗಿನ್ನಾರೂ ಗತಿಯಿಲ್ಲ" ಎಂದು ಕಣ್ಣೀರಿಟ್ಟು ಬಾರಿ ಬಾರಿ ಹೇಳಿದ್ದರು. ಆದುದರಿಂದ ನಾನು ನಿಮ್ಮನ್ನು ಏಕಾಂಗಿಯಾಗಿ ಎಲ್ಲಿಗೂ ಹೋಗಬಿಡೆನು.

**ಸುಧಾ**—ಆಗಲಿ, ನಿನ್ನಿಚ್ಛೆ ಇದ್ದಂತೆಯೇ ಆಗಲಿ. ಇನ್ನು ಮುಂದೆ ನೀನೇ ನನ್ನ ತಂದೆ ತಾಯಿ. ನಾನಿನ್ನು ಮುಂದೆ ತುಳಸಿಯಮ್ಮನ ಪುತ್ರಿ ಸುಧೆಯಲ್ಲ; ಬ್ರಾಹ್ಮಣ ತರುಣಿಯಲ್ಲ. ನಿನ್ನ ಪುತ್ರಿಯೆಂದು ಪರಿಗಣಿಸಿ, ನನ್ನ ರಹಸ್ಯವನ್ನು ಒಂದಿಷ್ಟು ಬಯಲುಮಾಡದೆ ನಡೆಯುವಿಯಾದರೆ ನನ್ನೊಂದಿಗೆ ಬರಬಹುದು. (ಕೊರಗನು ಮೌನವಾಗಿರುವನು.) ಯಾಕೆ ಸುಮ್ಮನಿರುವಿ? ಒಪ್ಪುವಿಯೊ? ಇಲ್ಲವೊ? ಇಲ್ಲವಾದರೆ ನೀನೆಂದಿಗೂ ನನ್ನೊಂದಿಗೆ ಬರಕೂಡದು.

**ಕೊರಗ**—(ಕಣ್ಣೀರಿಳಿಸಿ) ಮಕ್ಕಳಿಲ್ಲದ ನಾನು ನಿಮ್ಮಂತಹ ಮಗಳೊಬ್ಬಳನ್ನು ಪಡೆಯುವಂತಾಗುವುದು ನನ್ನ ಜನ್ಮಜನ್ಮಾಂತರದ ಪುಣ್ಯ ಫಲವೇ ಸರಿ.

**ಸುಧಾ**—ಹಾಗಾದರೆ, ಸುಧೆ ಇಂದು ಸತ್ತು ನಿನ್ನ ಮಗಳಾಗಿ ಪುನರುಜ್ಜೀವಿಸಿರುವಳು. ಇನ್ನು ನನ್ನ ರಕ್ಷಕ ತಂದೆತಾಯಿ ನೀನು. ಪತಿಯು ವ್ಯಭಿಚಾರಿಣಿಯೆಂದು ತ್ಯಜಿಸಿರುವ, ಸಮಾಜವು ಭಿಕಾರಿಣಿಯೆಂದು ಬಹಿಷ್ಕರಿಸಿ ತಿರಸ್ಕರಿಸಿರುವ, ಬಂಧುಬಳಗವು ಕಳಂಕಿನಿಯೆಂದು ದೂರೀಕರಿಸಿರುವ, ತಾಯಿಯು ಪಾಪಿನಿಯೆಂದು ಅಗಲಿ ಹೋಗಿರುವ ಈ ಹತಭಾಗ್ಯೆಗೆ ನಿಮ್ಮಂತಹ ತಂದೆತಾಯಿ ದೊರೆತುದು ದೊಡ್ಡ ಭಾಗ್ಯ ನನಗಿನ್ನೇನೂ ಚಿಂತೆಯಿಲ್ಲ. ಯಾರಿಗೂ ತಿಳಿಯದಂತೆ ಆದಷ್ಟು ಬೇಗನೆ ಇಲ್ಲಿಂದ ಹೋಗುವ ವ್ಯವಸ್ಥೆಯನ್ನು ನೀನೇ ಮಾಡು.

---

# ೧೧ನೇ ದೃಶ್ಯ—ಬೀದಿ

[ಪ್ರಭಾಕರ ಮತ್ತು ಲೀಲಾವತಿಯರು ಸಲ್ಲಾಪಿಸುತ್ತಾ ಮನೆಯ ಕಡೆಗೆ ಹೋಗುವರು]

**ಲೀಲಾ**—ಎಲ್ಲಿಯ ವರೆಗೂ ನಟನೆಯನ್ನಾ ನಿಮ್ಮದು!

**ಪ್ರಭಾಕರ**—ಏನು ನಟನೆ?

**ಲೀಲಾ**—ಮತ್ತೇನು? ಇಂಗ್ಲೆಂಡಿಗೆ ಹೋದವರೆಲ್ಲಾ ನಿಮ್ಮಂತೆಯೇ ನಡೆಯುವರೇ? ನಿಮಗೆ ನಾಚಿಕೆಯಿಂದ ಒಂದು ಮಾತನಾಡಲಿಕ್ಕೂ ಆಗಲಿಲ್ಲ ನನ್ನ ಗೆಳೆಯ ಗೆಳತಿಯರ ಮುಂದೆ!

**ಪ್ರಭಾಕರ**—ನನ್ನ ಸ್ವಭಾವವೇ ಹಾಗೆ. ನಾನು ಹೆಂಗಸರೊಡನೆ ಮಾತನಾಡುವುದೇ ಕಡಿಮೆ.

**ಲೀಲಾ**—ಹೌದು, ಗೊತ್ತುಂಟಿಲ್ಲಾ! ಮಾನಗೆಟ್ಟವರೇ ಬೇಕೆಂತ ಕಾಣುತ್ತದೆ ಚೆನ್ನಾಗಿ ಮಾತನಾಡಲಿಕ್ಕೆ?

**ಪ್ರಭಾಕರ**—ಮಾನಗೆಟ್ಟವರಾರು?

**ಲೀಲಾ**—ಯಾರೆಂದು ನಾನು ಬಾಯ್ಬಿಟ್ಟು ಹೇಳಬೇಕೆ? ಆ ಸುಧೆಯು ಸ್ತ್ರೀಯಲ್ಲವೇ?

**ಪ್ರಭಾಕರ**—ನೀನೇಕೆ ಸದಾ ಸುಧೆ ಸುಧೆಯೆಂದು ಸುಧೆಯ ಪ್ರಸ್ತಾಪವೆತ್ತುತ್ತಿರುವುದು?

**ಲೀಲಾ**—ಓಹೊ! ಮರೆತೇ ಬಿಟ್ಟೆ. ತಪ್ಪಾಯಿತು, ಕ್ಷಮಿಸಿರಿ. ಇನ್ನು ಮುಟ್ಟವಳ ಸುದ್ದಿಯನ್ನೇ ನಾನೆತ್ತುವುದಿಲ್ಲ. ಆದರೆ ನೀವು ನಿಮ್ಮ ವರ್ತನೆಯನ್ನು ಬದಲಾಯಿಸಬೇಕು. ನನಗೆ ಸತ್ತ ಹಾಗಾಯಿತು ಅವರ ನಡುವಿನಲ್ಲಿ.

**ಪ್ರಭಾಕರ**—ನಿನಗಾಗಿನ್ನು ನಾನು ನನ್ನ ಸ್ವಭಾವವನ್ನು ಬದಲುಮಾಡುವುದಾದರೂ ಹೇಗೆ?

**ಲೀಲಾ**—ನೀವು ಮಾಡದಿದ್ದರೆ ನಾನು ಮಾಡಬೇಕಾಗುವುದು.

**ಪ್ರಭಾಕರ**—ಹೇಗೆ?

**ಲೀಲಾ**—ಹೇಗೆಂದು ನಿಮಗೆ ಕ್ರಮೇಣ ತಿಳಿಯುವುದು. ಇನ್ನೊಂದು ಹತ್ತು ಟೀಪಾರ್ಟಿಗಳಿಗೆ ನನ್ನೊಂದಿಗೆ ಬಂದರೆ ನಿಮ್ಮ ನಾಚಿಕೆಯೆಲ್ಲಾ ಗುಡ್ಡೆ ಹತ್ತಿ ನೀವು 'ಅಪ್‌ಟು ಡೇಟ್' ಆಗುವಿರಿ.

**ಪ್ರಭಾಕರ**—ನೀನು 'ಅಪ್‌ಟು ಡೇಟ್' ಆಗಿದ್ದರೆ ಸಾಕು. ಇಬ್ಬರೂ ಆದರೆ ಕಡೆಗೆ ತೊಂದರೆಯಾದೀತು.

**ಲೀಲಾ**—ಏನು ತೊಂದರೆ? 'ಅಪ್‌ಟು ಡೇಟ್' ಹೆಂಡತಿಗೆ 'ಅಪ್‌ಟು ಡೇಟ್' ಗಂಡನಿದ್ದರೆ ಮಾತ್ರ ಚಂದವಲ್ಲವೆ?

**ಪ್ರಭಾಕರ**—(ರಿಸ್ಟ್‌ವಾಚ್ ನೋಡಿ) ತಡವಾಯಿತು. ಹೋಗುವ ಇನ್ನು.

**ಲೀಲಾ**—ನಿಮಗೆ ಮನೆಗೆ ಹೋಗಿ ಸೇರುವ ವರೆಗೆ ಅವಸರವಾಗುವದೊಂದು ಅವರೆಲ್ಲಾ ಗೇಲಿಮಾಡಿ ನನ್ನನ್ನು ನಾಚಿಸಿಬಿಟ್ಟರು. ನಿಮಗೇನಿಷ್ಟು ಅನ್ನುಂದು ಅವಸರ? ಒಂದು ಸೊಸೈಟಿಯಲ್ಲಿ ಹೇಗೆ ನಡೆಯಬೇಕೆಂಬುದೂ ತಿಳಿಯದೇ ನಿಮಗೆ? ಯುರೋಪಿಯನ್ ಸೊಸೈಟಿಯಲ್ಲಿದ್ದ ವರಂತೆ ಮಾತ್ರ?

**ಪ್ರಭಾಕರ**—ಯಾರು ಹೇಳಿದ್ದು ಯುರೋಪಿಯನ್ ಸೊಸೈಟಿಯಲ್ಲಿದ್ದೆನೆಂದು?

**ಲೀಲಾ**—ಇಂಗ್ಲಂಡಿನಲ್ಲಿ ಮತ್ಯಾರ ಸೊಸೈಟಿಯಲ್ಲಿದ್ದದ್ದು?

**ಪ್ರಭಾಕರ**—ಅಲ್ಲೀನು ಇಂಡಿಯನ್ನರು ಇಲ್ಲವೆ?

**ಲೀಲಾ**—ಓಹೋ! ಅಲ್ಲಿಯೂ ಎಲ್ಲರು ಇಂಡಿಯನ್ನರೊಂದಿಗೆಯೊ? ಅದೇ ಈಗ! ಮತ್ತೆ ನೀವು ಯುರೋಪಿಯನರ ನಡತೆಯನ್ನೆಲ್ಲಾ ಕಲಿಯುವುದು ಹೇಗೆ?

**ಪ್ರಭಾಕರ**—ಯುರೋಪಿಯನರ ನಡತೆಯಿಂದ ನಮಗೇನಾಗಬೇಕಾಗಿದೆ? ನಮಗೆ ನಮ್ಮ ನಡತೆಯಿಲ್ಲವೆ?

**ಲೀಲಾ**—ಹೌದು! ನಮ್ಮ ನಡತೆ ತಗೆದುಹಾಕಿದ್ದು! ಯುರೋಪಿಯನರಾದರೆ ಅದೆಷ್ಟು ಸೊಗಸಾಗಿ ಜೀವನ ನಡೆಸುತ್ತಾರೆ? ಅವರ ಕ್ರಮವೆಲ್ಲಾ ಎಷ್ಟು ಒಳ್ಳೇದು!

**ಪ್ರಭಾಕರ**—ಸಾಕು ಸಾಕು! ನಿನ್ನೊಡನಾ ಮಾತೆಲ್ಲಾ ಬೇಡ. ಅವರ ಕ್ರಮ ನಡತೆಗಳನ್ನು ನಾನರಿಯದವನೇ?

**ಲೀಲಾ**—ಅರಿಯದವರೆಂದವರಾರು? ಆದರೆ ನಮಗಿಂತ .....

**ಪ್ರಭಾಕರ**—ಆ ವಿಷಯ ಮಾತಿನ್ನು ಸಾಕು. ನಿನಗೆ ಬೇರೇನಾದರೂ ಮಾತಾಡಲಿಕ್ಕಿಲ್ಲವೇ? ನಡೆ ಹೋಗುವ. ಮನೆಯಲ್ಲಿ 'ಪೇಪರಾ'ದರೂ ಓದುವ.

**ಲೀಲಾ**—ಅಯ್ಯಪ್ಪಾ! ಇವತ್ತಿನ 'ಪೇಪರ'ನಲ್ಲಿ 'ವೆಂಬ್ಲೆಯು' ಟೆನ್ನಿಸ್ ಟೂರ್ನಮೆಂಟಿನ ಫೈನಲ್ ರಿಸಲ್ಟು ಬಂದಿರಬೇಕು. ನೋಡುವ ಹೋಗುವ.
**(ಹೋಗುವರು)**

# ೧೨ನೇ ದೃಶ್ಯ—ಮನೆ

[ಮದ್ರಾಸಿನ ಮೈಲಾಪುರದ ಸರ್ ಯಶವಂತರಾಯರ ಭವ್ಯನಿವಾಸದ ಪೋರ್ಟಿಕೋದಲ್ಲಿ ಮುಕುಂದರಾಯರು ಬಹಳ ಹರ್ಷಚಿತ್ತರಾಗಿ ಕುಳಿತು ಹಿಂದು ಪತ್ರಿಕೆಯನ್ನೋದುತ್ತಾ ಆಗಾಗ್ಗೆ ಅತ್ತಿತ್ತ ಕತ್ತುನೀಡಿ ಪ್ರಭಾಕರ ಲೀಲಾವತಿಯರು ಯಾವಾಗ ಬರುವರೆಂದು ಬಹಳ ಆತುರದಿಂದ ನಿರೀಕ್ಷಿಸಿಕೊಂಡಿರುವಾಗ, ಅವರಿಬ್ಬರೂ ಕಂಕುಳಲ್ಲಿ ಟೆನ್ನಿಸ್ ರೆಕೆಟನ್ನು ತುರುಕಿಸಿ ಕೈ ಕೈ ಹಿಡಕೊಂಡು ಪ್ರವೇಶಿಸುವರು]

**ಲೀಲಾ**—(ಮುಗುಳ್ನಗೆ ಬೀರುತ್ತಾ) ನಿಮ್ಮ ಮಗ ದಂಡ ಮಾವ.

**ಮುಕುಂದ**—ಇಂದೇನು ಇಷ್ಟು ತಡ ಲೀಲಾ? ಯಶವಂತರಾಯರು ನಿಮಗಾಗಿ ಕಾದು ಕಾದು ಸಾಕಾಗಿ ಕಡೆಗೆ ಕ್ಲಬ್ಬಿಗೆ ಹೋದರು.

**ಲೀಲಾ**—ತಡವೇನೆಂದು ನಿಮ್ಮ ಮಗನೊಡನೆ ಕೇಳಿ. ನಾನೂ ಅವರೂ ಪಂಥ ಹಾಕಿ ಸಿಂಗ್‌ಲ್ಸ್ ಆಡಿದುದು. ಮೊದಲನೆ ಸರ್ತಿ ಲವ್‌ಸೆಟ್, ಎರಡನೇ ದರಲ್ಲಿ ೧—೬, ಮೂರನೆದರಲ್ಲಿ ಪುನಃ ಲವ್‌ಸೆಟ್.

**ಮುಕುಂದ**—ಯಾರಿಗೆ ಲೀಲಾ?

**ಲೀಲಾ**—ಯಾರಿಗೆಂದು ನಿಮ್ಮ ಮಗನೊಡನೇ ಕೇಳಿ. ಇಂಗ್ಲೆಂಡಿಗೆ ಹೋದವರಂತೆ ಮತ್ತೆ! ಯಾಕೆ ಮಣ್ಣಿಗೋ ಏನೋ? ಟೆನ್ನಿಸ್ ಕೂಡ ಸರಿ ಯಾಗಿ ಆಡತಿಳಿಯದೆಂದರೆ! ನನಗೆ ಯಾಕೆ ಇವರೊಡನೆ ಪಂಥಕ್ಕೆ ನಿಂತೆ ನೆಂದು ತೋರಿತು.

**ಮುಕುಂದ**—ಅವ ಕಲಿಯುವಿಕೆಯಲ್ಲಿ ಚತುರನಿದ್ದನೇ ಹೊರತು ಆಟಕ್ಕೆ ಮನಸ್ಸು ಕೊಡಲಿಲ್ಲ ಲೀಲಾ. ಆದರೆ ಇಷ್ಟು ರಾತ್ರಿವರೆಗೆ ನೀವೇನು ಮಾಡು ತ್ತಿದ್ದುದು ಟೆನ್ನಿಸ್ ಕೋರ್ಟಿನಲ್ಲಿ?

**ಲೀಲಾ**—ಇಷ್ಟು ರಾತ್ರಿವರೆಗೆ! ಈಗ ಘಂಟೆ ೯ ಆಯಿತಷ್ಟೆ. ನನ್ನನ್ನು ಅಭಿನಂದಿಸಲೆಂದು ನನ್ನ ಗೆಳೆಯ ಗೆಳತಿಯರೆಲ್ಲಾ ಒಂದು ಟೀಪಾರ್ಟಿಕೊಟ್ಟರು. ಭಾಷಣಗಳಾದುವು. ನಿಮ್ಮ ಮಗ ಮಾತಾಡಬೇಕೆಂದು ಎಷ್ಟೊಂದು ಒತ್ತಾಯ ಪಡಿಸಿದರೂ ತುಟಿಯೆತ್ತದೆ ಮೂಕನಂತಿದ್ದರು. ಇಂಗ್ಲೆಂಡಿನಲ್ಲಿವರು ಎಲ್ಲಿ ದ್ದರೋ, ಏನು ಮಾಡುತ್ತಿದ್ದರೋ ಏನೋ!

**ಮುಕುಂದ**—ಬಹಳ ಸಾತ್ವಿಕ ಸ್ವಭಾವದ ಹುಡುಗ ಅವ ಲೀಲಾ. ಅದಂತಿ ರಲಿ, ನಿಮಗೀಗ ಎರಡು ಸಂತೋಷ ಸಮಾಚಾರ ತಿಳಿಸಲಿದೆ.

**ಲೀಲಾ**—ಅದೇನಂತಹ ಸಂತೋಷ ಸಮಾಚಾರ ಮಾವ?

**ಮುಕುಂದ**—ಪ್ರಭಾಕರನು ಕೊಯಮುತ್ತೂರಿನ ಸಬ್ ಜಡ್ಜನಾಗಿ ನೇಮಿಸಲ್ಪಡುವನಂತೆ.

**ಲೀಲಾ**—ಓಹೋ, ಅಷ್ಟೆಯೋ? ಪಪ್ಪಾ ಇಷ್ಟೆಲ್ಲಾ ಪ್ರಯತ್ನಮಾಡಿ ಕಡೆಗೆ ಸಿಕ್ಕಿದುದು ಸಬ್ ಜಡ್ಜ್ ಕೆಲಸವೆಯೋ?

**ಮುಕುಂದ**—ಅವರು ಚೀಫ್ ಜಸ್ಟಿಸರೊಡನೆ ಮಾತಾಡಿದರಂತೆ. ಆದರೆ, ಅವರು 'ಒಮ್ಮೆಯೇ ಡಿಸ್ಟ್ರಿಕ್ಟ್ ಜಡ್ಜ್ ಕೆಲಸಕೊಡಲಾಗುವುದಿಲ್ಲ, ಪ್ರಕೃತ ಸಬ್ ಜಡ್ಜ್ ಕೆಲಸನೋಡಲಿ, ಒಂದೆರಡು ವರ್ಷಗಳಲ್ಲೇ ಡಿಸ್ಟ್ರಿಕ್ಟ್ ಜಡ್ಜ್ ಕೆಲಸ ಕೊಡುವ' ಎಂದು ಭರವಸೆ ಕೊಟ್ಟರಂತೆ.

**ಲೀಲಾ**—ಎಷ್ಟು ವರ್ಷ ಹೋಗುತ್ತದೋ ಡಿಸ್ಟ್ರಿಕ್ಟ್ ಜಡ್ಜರಾಗಲಿಕ್ಕೆ? ಪಪ್ಪಾ ಬಹಳ ದಾಕ್ಷಿಣ್ಯದವರು. ಅವರಿಂದ ಇಂತಹ ಕೆಲಸವೆಲ್ಲಾ ಆಗುವ ಹಾಗಿಲ್ಲ. ನಾನಾದರೂ ಮಾತಾಡುತ್ತಿದ್ದೆ ಚೀಫ್ ಜಸ್ಟಿಸರ ಪತ್ನಿಯ ಹತ್ತಿರ!

**ಮುಕುಂದ**—ಒಮ್ಮೆಯೇ ಡಿಸ್ಟ್ರಿಕ್ಟ್ ಜಡ್ಜನಾಗಲಾಗುವುದೇ? ಸ್ವಲ್ಪವಾದರೂ ಅನುಭವ ಬೇಡವೆ ಲೀಲಾ?

**ಲೀಲಾ**—ಹೌದು ಅನುಭವ! ಅದಾಯಿತಲ್ಲ, ಇನ್ನೊಂದು ಸಂತೋಷ ಸಂಗತಿಯೇನು?

**ಮುಕುಂದ**—ಇನ್ನೊಂದು ಬಹಳ ಸಂತೋಷ ಸಂಗತಿ. ಇನ್ನು ನೀನೂ ಪ್ರಭಾಕರನೂ ಯಾವ ಸಂಕೋಚವೂ ಇಲ್ಲದೆ ಮಂಗಳೂರಿಗೆ ಹೋಗಿ ಕೆಲ ದಿನ ಆನಂದದಿಂದ ಕಳೆಯಬಹುದು. (**ಪ್ರಭಾಕರನು ಆತುರದಿಂದ ಮುಕುಂದ ರಾಯರ ಮುಖ ನೋಡುವನು.**)

**ಲೀಲಾ**—ಅಂದರೆ?

**ಮುಕುಂದ**—ಅಂದರೆ, ನಾವು ಹೇಗಾದರೂ ದೂರಮಾಡಬೇಕೆಂದಿದ್ದ ಮಾರಿ ತಾನಾಗಿಯೇ ದೂರವಾಗಿದೆಯಂತೆ.

**ಲೀಲಾ**—ಹಾಗಂದರೇನು? ಸ್ಪಷ್ಟವಾಗಿ ಹೇಳಬಾರದೇ?

**ಮುಕುಂದ**—ಇನ್ನೇನು ಸ್ಪಷ್ಟವಾಗಿ ಹೇಳುವುದು? ಆ ಭಿಕಾರಿಣಿ ಸುಧೆಯು ಮಂಗಳೂರು ಬಿಟ್ಟು ಎಲ್ಲಿಗೋ ಹೋಗಿರುವಳಂತೆ. ಮಂಗಳೂರಿಂದ ಬಂದ ಸನ್ಮಾಪ್ತರೊಬ್ಬರು ನನಗಿಂದು ಸಂಜೆ ತಿಳಿಸಿದರು.

**ಲೀಲಾ**—ಛಿ! ಛಿ! ಸುಧೆಯ ಮಾತೆತ್ತಬೇಡಿ! ಅವರಿಗೆ ಏನೇನೋ ಆಗಿಬಿಡುತ್ತದೆ!

**ಮುಕುಂದ**—ಏನೇನೋ ಆಗದಿರುವುದೇ ಲೀಲಾ? ಎಷ್ಟಾದರೂ ನಾಚಿಕೆಯಿಲ್ಲವೇ?

**ಲೀಲಾ**—ಇವರಿಗೇನು ನಾಚಿಕೆ? ಅವಳು ಮಾನಮರ್ಯಾದೆಯಿಲ್ಲದೆ....

**ಪ್ರಭಾಕರ**—ಸಾಕಾ ಮಾತು.

**ಲೀಲಾ**—ಇದರರ್ಥವೇನು? ಆ ವ್ಯಭಿಚಾರಿಣಿಯ ಪ್ರಸ್ತಾಪವೆತ್ತಿದೊಡನೆಯೇ "ಸಾಕಾ ಮಾತು ಬಿಡಿ" ಎಂದು ಇವರು ಸಿಡುಕಲು ಕಾರಣವೇನಪ್ಪಾ? ಮಾನಗೆಟ್ಟು ನಡೆಯುವುದು......

**ಪ್ರಭಾಕರ**— ಬಿಡಿ, ಆ ಪ್ರಸ್ತಾಪವೆಂದರೆ!

**ಲೀಲಾ**—ನೋಡಿ ಮಾವ, ಏನರ್ಥ ಈ ಮಾತಿಗೆ? ಇವರ ಮನಸ್ಸಿನಲ್ಲೇ ನಿಜಯಂದು ತಿಳಿಯುವುದಿಲ್ಲವಲ್ಲಾ? ಬಾಯ್ಬಿಟ್ಟು ಹೇಳಿರಪ್ಪಾ ಮನಸ್ಸಿನಲ್ಲಿಟ್ಟುದನ್ನೆಲ್ಲಾ!

**ಮುಕುಂದ**—ಅವನು ಹೇಳುವುದು ಸಹಜ. ಇನ್ನೇಕೆ ಆ ಮಾರಿಯ ಪ್ರಸ್ತಾಪ? ಅವಳು ಮಾಡಿದ್ದನ್ನು ಅನುಭವಿಸುತ್ತಾಳೆ.

---

## ೧೩ನೇ ದೃಶ್ಯ—ಬೀದಿ

[ಬಿಸಿಲ ಬೇಗೆಯಲ್ಲಿ ಬಳಲಿ ಬವಣೆಯಿಂದ ಬೆಂದಂತಾಗಿ ಕೊರಗನು ಅರವಿಂದನನ್ನು ಎತ್ತಿಕೊಂಡು ರಸ್ತೆಯ ಏರೊಂದನ್ನು ಬಲು ಕಷ್ಟದಿಂದ ಏರಿ ಹೋಗುತ್ತಿರುವನು. ಸುಧೆಯು ಹಿಂದಿನಿಂದ ಅವನನ್ನು ನೋಡುತ್ತಾ ಬಹಳ ಕನಿಕರಗೊಂಡು ಆಗಾಗ ಕಣ್ಣೀರಿಳಿಸಿ ನಡೆದು ಬರುವಳು.]

**ಕೊರಗ**—(ಹಿಂದೆ ತಿರುಗಿ ನೋಡಿ ಸುಧೆಯು ಕಣ್ಣೀರಿಡುತ್ತಿದ್ದುದನ್ನು ಕಂಡು ಬಹಳ ಸಂತಾಪಗೊಂಡು) ಅಮ್ಮಾ! ಅದೇಕೆ ಕಣ್ಣೀರಿಡುವಿರಿ? ಏನಾಯಿತು ನಿಮಗೆ? ನಡೆಯಲಾಗುವುದಿಲ್ಲವೇ? ಪಾಪ! ಎಲ್ಲಿ ನಡೆದವರು ನೀವು? ಅಮ್ಮಾ, ಬಾಯಾರಿಕೆಯಾಗುವುದೇ!

**ಸುಧಾ**—ಇಲ್ಲ ಕೊರಗ, ನನಗೇನೂ ಆಗುವುದಿಲ್ಲ. ನಾನಿನ್ನೆಷ್ಟು ಬೇಕಾದರೂ ನಡೆಯುವೆನು. ಆದರೆ.......

# ವ್ಯಭಿಚಾರಿಣಿ ಯಾರು



**ಕೊರಗ**— ಈ ಮುದ್ದು ಕುವರನಂತಿರಲಿ. ಮಣಗಟ್ಲೆ ಭಾರಹೊತ್ತು ಒಂದೇ ಸವನೆ ಇಂತಹ ಒಂದಲ್ಲ ಹತ್ತು ಏರನ್ನು ಹತ್ತಬಲ್ಲೆನು ನಾನು.

(ಪುಟ 47)

**ಕೊರಗ**—ಏನು ಆದರೆ? ಅದೇಕೆ ಸುಮ್ಮನಿರುವಿರಿ?

**ಸುಭಾ**—(ಪುನಃ ಕಣ್ಣೀರನ್ನು ಸೆರಗಿಂದೊರಸಿ) ಆದರೆ ಮುದುಕನಾದ ನೀನೀ ಕಡುಬಿಸಿಲಲ್ಲಿ ಮೈತುಂಬಾ ಬೆವರಿಳಿಸಿ ಮಗುವನ್ನು ಹೊತ್ತುಕೊಂಡು ಏರು ಹತ್ತಿ ಹೋಗುವ ಕಷ್ಟ ನೋಡಿ ನನ್ನ ಹೃದಯವು ಕರಗಿ ನೀರಾಯಿತು. (ಗದ್ಗದ ಕಂಠರಾಗಿ ಮುಂದೆ ಮಾತನಾಡಲಾರದೆ ಹೋಗುವಳು)

**ಕೊರಗ**—ಅಮ್ಮಾ! ನನಗಾಗಿ ನೀವು ಚಿಂತಿಸುವುದೇ? ಇದಕ್ಕಿಂತಲೂ ತೀವ್ರ ಬಿಸಿಲನ್ನು ಒಂದಿಷ್ಟೂ ಗಣಿಸದೆ ಗೇದು ಗೇದು ಅಭ್ಯಾಸವಾಗಿರುವ ದೇಹವಿದು. ಈ ಮಗು ಕುವರನಂತಿರಲಿ, ಮಣಗಟ್ಟಲೆ ಭಾರವೊತ್ತು ಒಂದೇ ಸಮನೆ ಇಂತಹ ಒಂದಲ್ಲ ಹತ್ತು ಏರನ್ನು ಹತ್ತಬಲ್ಲೆ ನಾನು. ನನಗಾಗಿ ನೀವು ಒಂದಿಷ್ಟೂ ಯೋಚಿಸಬಾರದಮ್ಮಾ.

**ಸುಭಾ**—ಕೊರಗ, ನನಗೇನೋ ಆಯಾಸವಾಗುವುದು. ಅದೋ ಆ ಮರದಡಿಯಲ್ಲಿ ಕೂತು ತುಸು ವಿಶ್ರಮಿಸಿ ಆ ಮೇಲೆ ಮುಂದೆ ಹೋಗುವ.

**ಕೊರಗ**—ಅಮ್ಮಮ್ಮಾ! ಎಂತಹ ಬಿಸಿಲು! ನೀವು ಬಹಳ ಸೋತುಹೋಗಿರಬೇಕು. ನನಗೆ ನಡೆಯುವುದೊಂದೇ ಗೊತ್ತು. ಮಗುವಿನ ಮೈಯೂ ಬೆವರಿ ಹೋಗಿದೆ; ಮುಖ ಬಾಡಿ ಹೋಗಿದೆ. ಅದಕ್ಕೇನು ಬಾಯಾರಿಕೆಯಾಗುವುದೋ? ಹತ್ತಿರದಲ್ಲೊಂದು ಮನೆ ತೋರುತ್ತದಮ್ಮ. ಸ್ವಲ್ಪ ಹಾಲಿದ್ದರೆ ಬೇಡಿ ತರುತ್ತೇನೆ ಮಗುವಿಗೆ ಕುಡಿಯಲಿಕ್ಕೆ! (ಕಂಕುಳಿನ ಗಂಟೊಂದನ್ನು ಬಿಟ್ಟು ಅದರೊಳಗಿನ ಕಂಚಿನ [illegible] ಚಂಬಿಗೆಯೊಂದನ್ನು ಹಿಡಿದುಕೊಂಡು ಹೋಗುವನು. ಸುಭಾ ಮಗುವನ್ನು ತೊಡೆಯಲ್ಲಿರಿಸಿಕೊಂಡು ಚಿಂತಾಮಗ್ನಳಾಗುವಳು. ತುಸು ಹೊತ್ತಿನಲ್ಲಿ ಕೊರಗನು ಹಾಲನ್ನು ತಂದು ಮಗುವಿಗೆ ಕುಡಿಸುವನು. ಬಳಿಕ ಇಬ್ಬರೂ ಮುಂದರಿಸುವರು.)

## ೧೪ನೇ ದೃಶ್ಯ—ಮನೆ

[ಬಳ್ಳಾರಿ ಪಟ್ಟಣದ ಹೊರವಲಯದ ಭವ್ಯ ನಿವಾಸದ ನಡುಕೋಣೆಯಲ್ಲಿ ಬಳ್ಳಾರಿಯ ಡಿಸ್ಟ್ರಿಕ್ಟ್ ಜಡ್ಜರಾದ ಶ್ರೀಧರರಾಯರು ಆರಾಮ ಕುರ್ಚಿಯಲ್ಲಿ ಚಿಂತಾಮಗ್ನರಾಗಿ ಕುಳಿತಿರುವರು. ಹತ್ತಿರದ ಸುಂದರವಾದ ಕುಸುರಿನ ಮೇಜಿನ ಮೇಲೆ ಕೌಂಟ್ ಟೋಲ್ ಸ್ಟೋಯಿಯವರ ಕಾದಂಬರಿಯೊಂದಿರುವುದು. ಸುಮಾರು ೧೦ ಘಂಟೆ ರಾತ್ರಿಗೆ ಲೀಲಾವತಿಯು ಒಂದು ಟೆನ್ನಿಸ್ ರಕೆಟ್ ಹಿಡಿದುಕೊಂಡು ಒಳಹೊಕ್ಕು

**ಊರಟು ಮೇಜಿಯ ಮೇಲಿನ ಪುಸ್ತಕವನ್ನು ತೆಗೆದು ತೆರೆದು ನೋಡಿ ಅದನ್ನು ಡಬ್ಬನೆ ಮೇಜಿಯ ಮೇಲೆ ಬಿಸಾಡಿ]**

**ಲೀಲಾ**—ನಾನೊಂದು ದಿನ ಈ ಟೋಲ್ ಸ್ಟೋಯಿಯ ಪುಸ್ತಕಗಳನ್ನೆಲ್ಲಾ ಸುಟ್ಟುಹಾಕುತ್ತೇನೆ ನೋಡಿ! ನಿಮಗೇನು ಬೇರೆ ಕಾದಂಬರಿಗಳಿಲ್ಲವೆ ಓದಲಿಕ್ಕೆ?

**ಪ್ರಭಾಕರ—(ಕ್ರೂರ ನೋಟ ಬೀರಿ)** ಟೋಲ್ ಸ್ಟೋಯಿಯ ಪುಸ್ತಕಗಳ ನ್ನೋದಿದರೇನು?

**ಲೀಲಾ**—ಏನೆಂದು ನಿಮ್ಮನ್ನೇ ನೋಡಿದರೆ ತಿಳಿಯವೆ? ನೀವು ಯಾವಾ ಗಲೂ ಏನನ್ನು ಚಿಂತಿಸುತ್ತಾ ಕುಳಿತಿರುವುದು? ನಿಮ್ಮಂತಹ ಜಡ್ಜರುಗಳೆಲ್ಲಾ ಹೀಗೆಯೇ ಮಾಡುವರೇ? ಇತ್ತಲಾಗಿ ಕ್ಲಬ್ಬಿಗೆ ಹೋಗುವುದನ್ನೂ ಕಡಿಮೆ ಮಾಡಿರುವಿರಲ್ಲಾ? ಟೆನ್ನಿಸ್ ಆಡುವುದಂತಿರಲಿ!

**ಪ್ರಭಾಕರ**—ನಿನಗೇನಾಯಿತದರಿಂದ? ನನ್ನ ಪರವಾಗಿ ನೀನೇ ಎಲ್ಲಾ ಮಾಡುತ್ತಿರುವೆಯಲ್ಲ?

**ಲೀಲಾ**—ಯಾವ ಮೋರೆಯಿಂದ ಹೇಳುವುದು ನೀವೀ ಮಾತನ್ನು? ಒಂದಿಷ್ಟು ನಾಚಿಕೆಯಾದರೂ ಆಗುವುದಿಲ್ಲವೇ?

**ಪ್ರಭಾಕರ**—ನಾಚಿಕೆಯೇನು?

**ಲೀಲಾ**—ನಾಚಿಕೆಯೇನೆಂದು ಸ್ವಲ್ಪ ಹೊರ ಹೋಗಿ ವಿಚಾರಿಸಿದರೆ ತಿಳಿ ದೀತು! ಜನರು ಏನೆಲ್ಲಾ ಮಾತಾಡಿಕೊಳ್ಳುತ್ತಿರುವರು! ನನಗಂತೂ ಕಿವಿ ಬಿಟ್ಟು ಹೊರಹೋಗಲಿಕ್ಕಿಲ್ಲ. "ಜಡ್ಜರೇನು ಸನ್ಯಾಸ ಸ್ವೀಕರಿಸಿರುವರೇ? ಅಥವಾ ಈ ಕಾರ್ಯಗಳನ್ನೆಲ್ಲಾ ನಿಮಗೆ ಬಿಟ್ಟು ತಾವು ಮನೆಯೊಳಗೆ ಪರದೆ ಸ್ವೀಕರಿಸಿರುವರೇ?" ಎಂದು ನಿಮ್ಮ ಮಿತ್ರರೇ ಪರಿಹಾಸ್ಯಮಾಡಿ ಕೊಲ್ಲುತ್ತಾರೆ ನನ್ನನ್ನು!

**ಪ್ರಭಾಕರ**—ನೀನಿರುವೆಯಲ್ಲ ನನ್ನ ಪ್ರತಿನಿಧಿ! ಮತ್ತೇನು?

**ಲೀಲಾ**—ನೀವ್ಯಾಕೆ ಮತ್ತೆ ಗಂಡಸಾಗಿ ಹುಟ್ಟಿದ್ದು?

**ಪ್ರಭಾಕರ**—ಗಂಡಸನ್ನೂ ಹಿಂದಿಕ್ಕುವ ಹೆಂಡತಿಯೊಬ್ಬಳು ದೊರೆಯುವ ಳೆಂದು!

**ಲೀಲಾ**—ಸಾಕು ಸಾಕು ತಮಾಷೆ! ಇವತ್ತಿನ ಟೀಪಾರ್ಟಿಯಲ್ಲಿ ನಿಮ್ಮದೇ ಮಾತು.

**ಪ್ರಭಾಕರ**—ಯಾರ ಟೀಪಾರ್ಟಿ? ನಿನಗಿಂದು ಬರಲು ಇಷ್ಟು ತಡವೇನು?

**ಲೀಲಾ**—ಇಂದು ಕ್ಲಬ್ಬಿನಲ್ಲಿ ಕಲೆಕ್ಟರರ ಟೀಪಾರ್ಟಿ, ಗಾಯನ, ನರ್ತನವಿತ್ತು.

**ಪ್ರಭಾಕರ**—ನೀನು ಯಾರ ಕಾರಿನಲ್ಲಿ ಬಂದುದು?

**ಲೀಲಾ**—ನನಗೆ ಇಚ್ಛೆ ತೋರಿದವರದರಲ್ಲಿ! ಅದೆಲ್ಲಾ ನಿಮಗೇಕೆ? ನೀವು ಕಾರು ಕಳುಹಿಸಲಿಲ್ಲವಲ್ಲ?

**ಪ್ರಭಾಕರ**—ನೀನು ಯಾವಾಗ ಬರುವೆಯೆಂದು ನಾನು ಕಳುಹಿಸುವುದು?

**ಲೀಲಾ**—ಯಾವಾಗಲಾದರೂ ಬಾರದೆ ಕ್ಲಬ್ಬಿನಲ್ಲಿಯೆ ಕುಳಿತುಕೊಳ್ಳುವೆನೆ?

**ಪ್ರಭಾಕರ**—ನಿನಗೆ ಸಿಕ್ಕಸಿಕ್ಕವರ ಹಲವು ಕಾರುಗಳಿರುವಾಗ ನಾನೇಕೆ ಕಳುಹಿಸಬೇಕು?

**ಲೀಲಾ**—ನೀವು ಕಳುಹಿಸದಿದ್ದರೆ ಸಿಕ್ಕಸಿಕ್ಕವರ ಕಾರಿನಲ್ಲಾದರೂ ಬಾರದೆ ಕೂತುಕೊಳ್ಳಲಾಗುವುದಿಲ್ಲವಷ್ಟೆ?

**ಪ್ರಭಾಕರ**—ಒಂದುವೇಳೆ ಬಾರದಿದ್ದರೂ ಏನು? ನಿನಗೆ ಮನೆಗಳಿಗೇನು ಕಡಿಮೆಬಿದ್ದಿದೆಯೋ ಈ ಊರಲ್ಲಿ?

**ಲೀಲಾ**—ಸಾಕು ಸಾಕು ನಂಜು ಮಾತೆಲ್ಲ! ಟೋಲ್‌ಸ್ಟೋಯಿ, ಗಾಂಧಿ ಮೊದಲಾದ ದೊಡ್ಡ ದೊಡ್ಡ ತತ್ವಜ್ಞಾನಿಗಳ ಪುಸ್ತಕ ಓದಿ ಓದಿ ಕಲಿತುದು ಇದೆಯೋ? ಗಂಡಸರ ಸ್ವಭಾವವದು ಯಾವಾಗಲೂ ನಂಜು ಕಾರುತ್ತಿರುವುದು! ಮತ್ಸರವೆಂದರೆ ಕೊಟ್ಟರುಂಟವರಿಗೆ.

**ಪ್ರಭಾಕರ**—ಹೆಂಗಸರು ಕೆಟ್ಟ ಚಂಡಿಗಳಾದರೆ ಗಂಡಸರೇನು ಮಾಡು ವುದು ಮತ್ತೆ?

**ಲೀಲಾ**—ಬೇರೇನು ಗೊತ್ತಿಲ್ಲದಿದ್ದರೂ ಮಾತಾಡ್ಲಿಕ್ಕೊಂದು ಚೆನ್ನಾಗಿ ಕಲಿತಿರುವಿರಿ! ನಾನೊಂದು ಸಿಕ್ಕಿದುದಕ್ಕಾಯಿತು, ಇಲ್ಲವಾದರೆ ನೊಣ ಹೊಡೆ ಯುತ್ತಾ ಕಾಲಕಳೆಯಬೇಕಿತ್ತು!

**ಪ್ರಭಾಕರ**—ಅಂದರೆ?

**ಲೀಲಾ**—ಅಂದರೆ ನಿಮ್ಮಿಂದೇನಾಗುವುದು? ನನ್ನನ್ನು ಮದುವೆಯಾಗದಿ ದ್ದರೆ ನಿಮಗೆ ಸಬ್‌ಜಡ್ಜ್ ಕೆಲಸವಾಗುತ್ತಿತ್ತೇ? ಆ ಮೇಲೆ ನಾನು ಸ್ವತಹ ಹೋಗಿ ಚೀಫ್ ಜಸ್ಟಿಸರ ಪತ್ನಿಯೊಡನೆ ಮಾತಾಡದಿರುತ್ತಿದ್ದರೆ ನಿಮಗೆ ಎರಡೇ ವರ್ಷಗಳಲ್ಲಿ ಡಿಸ್ಟ್ರಿಕ್ಟ್ ಜಡ್ಜ್ ಪದವಿ ದೊರೆಯುತ್ತಿತ್ತೇ?

**ಪ್ರಭಾಕರ**—ಆಯ್ತಪ್ಪಾ, ಎಲ್ಲವೂ ನಿನ್ನಿಂದಲೇ ಆದುದು! ಇನ್ನಾದರೂ ಈ ಪಲ್ಲವಿಯನ್ನು ನಿಲ್ಲಿಸುವೆಯಾ? ಒಂದಿಷ್ಟು ಬೇಸರವಾದರೂ ಆಗುವುದಿಲ್ಲವೇ ನಿನಗದನ್ನು ಹೇಳಿ ಹೇಳಿ?

**ಲೀಲಾ**—ಯಾಕೆ ಬೇಸರವಾಗುವುದು? ಇನ್ನೂ ಹೇಳುತ್ತೇನೆ, ಮತ್ತೂ ಹೇಳುತ್ತೇನೆ, ಏನು ಮಾಡುವಿರಿ? ನಾನೇನು ಅಲ್ಲದ ಸಂಗತಿ ಹೇಳುವುದೇ? ನೀವೇ ಅಭಿಮಾನಪಡುವ ವಿಷಯವಲ್ಲವೇ ಅನು?

**ಪ್ರಭಾಕರ**—ನನ್ನಿಂದೇನು ಮಾಡಲು ಸಾಧ್ಯವಿದೆ? ಬೇಕಾದಷ್ಟು ಸಲ ಹೇಳು, ನನಗೇನು?

**ಲೀಲಾ**—ತಲೆಯ ಮೇಲೆ ಪಪ್ಪಾ ಒಬ್ಬರು ಕೂತುಕೊಂಡಿರದಿದ್ದರೆ ನೀವು ಮಾಡುವುದನ್ನೆಲ್ಲಾ ಮಾಡಿಯೇ ಬಿಡುತ್ತಿದ್ದಿರೆಂದು ಚೆನ್ನಾಗಿ ಬಲ್ಲೆ ನಾನು! ನೀವೇನು ಸಾಮಾನ್ಯ ಸಿಟ್ಟಿನವರಲ್ಲ! ನಿರ್ವಾಹವಿಲ್ಲದೆ ಈಗ ಎಲ್ಲವನ್ನೂ ನುಂಗಿ ನುಂಗಿ ನಂಜುಕಾರುತ್ತಿದ್ದೀರಿ!

**ಪ್ರಭಾಕರ**—ಆಯ್ತು, ಇನ್ನು ಮಾತಾಡುವುದೇ ಇಲ್ಲ. ಆದರೆ ನೀನೇ ಕೆಣಕಿ ಕೆಣಕಿ ಮಾತಾಡುವಾಗ ನಾನು ಸುಮ್ಮನಿರುವುದು ಹೇಗೆ?

**ಲೀಲಾ**—ನಿಮ್ಮೊಡನೆ ಮಾತಾಡಿ ನನಗೇನಾಗಬೇಕು? ಸಾಕು ನಿಮ್ಮನ್ನು ಮದುವೆಯಾದುದಕ್ಕೆ ನಾನು ಅನುಭವಿಸಿದ ಸುಖ!

**ಪ್ರಭಾಕರ**—ನಿನ್ನ ಸುಖಕ್ಕೇನು ಕೊರತೆ ಬಂದಿದೆ ಈಗ?

**ಲೀಲಾ**—ನನ್ನ ಸುಖಕ್ಕೇನು ಕೊರತೆಯೇ? ನೀವು ಬೇಗನೆ ವರ್ಗಮಾಡಿಸಿ ಕೊಳ್ಳದಿದ್ದರೆ ನನಗಿಲ್ಲಿರಲು ಸಾಧ್ಯವಿಲ್ಲ! ಅಬ್ಬಬ್ಬ, ಇಲ್ಲಿಯ ಹವಾಗುಣವೋ, ಜನರೋ, ಅವರ ಜೀವನವೋ! ಕಲೆಕ್ಟರರ ಟೆನ್ನಿಸ್ ಕೋರ್ಟು ಮತ್ತು ಕ್ಲಬ್ಬೊಂದಲ್ಲದಿರುತ್ತಿದ್ದರೆ ನನಗೆ ಹುಚ್ಚು ಹಿಡಿಯುತ್ತಿತ್ತು. ಸಾಲದುದಕ್ಕೆ ನಿಮ್ಮ ಕಾಟ ಬೇರೆ!

**ಪ್ರಭಾಕರ**—ನನ್ನ ಕಾಟ! ನಿನ್ನನ್ನು ಇಚ್ಛಾನುಸಾರ ಬಿಟ್ಟುದು ತಪ್ಪಾಯಿತೆ?

**ಲೀಲಾ**—ನೀವೇನು ಇಚ್ಛಾನುಸಾರ ಬಿಡುವುದು? ನಾನೇನು ನಿಮ್ಮ ಚಾಕರಿಯವಳೆಂದು ಭಾವಿಸಿದಿರಾ? ನನ್ನಿಚ್ಛೆಯಂತೆ ನಾನು ನಡೆದರೆ ನೀವು ಇಚ್ಛಾನುಸಾರ ಬಿಡುವುದೇ? ನಿಮ್ಮನ್ನು ನಿಮ್ಮಿಚ್ಛಾನುಸಾರ ನಾನು ಬಿಟ್ಟಿಲ್ಲವೇ? ಮದುವೆಯಾದಾಕ್ಷಣ ಹೆಂಗಸು ಗಂಡಸಿನ ದಾಸಿಯಾಗಿ ಹೋಗುವಳೇ?

**ಪ್ರಭಾಕರ**—ಇಲ್ಲ, ರಾಣಿಯಾಗಿ ಬಿಡುತ್ತಾಳೆ!

**ಲೀಲಾ**—ರಾಣಿಯಾದರೆ ರಾಣಿ, ಯಾಕಾಗಬಾರದು? ಹೆಂಗಸಿನ ಮೇಲೆ ಅಧಿಕಾರ ನಡಿಸುವ ಹಕ್ಕು ಗಂಡಸಿಗಿರುವುದಾದರೆ ಹೆಂಗಸಿಗೂ ಆ ಅಧಿಕಾರ ಯಾಕಿರಬಾರದು?

**ಪ್ರಭಾಕರ**—ಗಂಡಹೆಂಡಿರಿಬ್ಬರು ಒಬ್ಬರೊಬ್ಬರ ಮೇಲೆ ಅಧಿಕಾರ ನಡಿಸುವುದರಲ್ಲಿ ನಿರತರಾದರೆ ಸಂಸಾರ ರಥವು ಬಹಳ ಸುಗಮವಾಗಿ ನಡೆಯುವುದು!

**ಲೀಲಾ**—ನಡಿಯದಿದ್ದರೆ ಮುರಿದು ಬೀಳಲಿ! ಯಾರಿಗೇನು? ನೀವು ಇದೇ ರೀತಿ ನಡೆದ ಪಕ್ಷದಲ್ಲಿ ನಾನಿಲ್ಲಿರಲಾರೆ! ನೀವೂ ಕೆಲಸಬಿಟ್ಟು ಕೊಂಡಿರಲಾರಿರಿ! ಇದನ್ನೆಲ್ಲಾ ಚೆನ್ನಾಗಿ ವಿಚಾರಿಸಿ ನಡೆಯಿರಿ! ಕೋಪಬಂದರೆ ಪಪ್ಪಾ ಮತ್ತೆ....

**ಪ್ರಭಾಕರ**—ಸಾಕುಸಾಕು ಬಾಯಿಮುಚ್ಚು! ನೀನೂ ನಿನ್ನ ಪಪ್ಪನೂ ಬೇಕಾದುದನ್ನು ಮಾಡಿ! ಸಾಕು ನಾನು ಪಟ್ಟ ಸುಖ ನಿನ್ನಿಂದಾಗಿ!

**ಲೀಲಾ**—ಅದಂತಿರಲಿ, ನಾಡಮು ಲೋ ಮೆಂಬರರು ಇಲ್ಲಿಗೆ ಬರುವರಂತೆ. ಅವರು ಪಪ್ಪನ ಪರಮಾಪ್ತರಂತೆ. ಅವರಿಗೆ ದೊಡ್ಡ ಡಿನ್ನರ್‌ಪಾರ್ಟಿಕೊಟ್ಟು ಸಂತೋಷಪಡಿಸಬೇಕಂತೆ. ಇವತ್ತು ಪಪ್ಪನ ಕಾಗದ ಬಂದಿದೆ ನನಗೆ.

**ಪ್ರಭಾಕರ**—ಹಾಗಾದರೆ ಕೊಡುವುದೊಂದು ದೊಡ್ಡ ಡಿನ್ನರ್‌ಪಾರ್ಟಿ!

**ಲೀಲಾ**—ಕೊಡುವುದೆಂದರೆ ಹಣಬೇಕಲ್ಲ?

**ಪ್ರಭಾಕರ**—ಪಪ್ಪನಿಗೆ ಬರೆದು ತರಿಸುವುದು! ಮತ್ತೆ ನನ್ನ ಕೈಯಲ್ಲಿಲ್ಲ. ನೀನು ವಾರಕ್ಕೊಂದು ಟೀಪಾರ್ಟಿ, ಡಿನ್ನರ್‌ಪಾರ್ಟಿ ಕೊಟ್ಟು, ತಿಂಗಳಿಗೊಮ್ಮೆ ಮದ್ರಾಸಿಗೆ ಹೋಗಿಬರುತ್ತಾ ಇದ್ದರೆ ನನ್ನ ಕೈಯಲ್ಲಿ ಹಣವೆಲ್ಲಿಂದ ಉಳಿಯ ಬೇಕು? ಸಂಬಳದ ಮುಕ್ಕಾಲಂಶ ನಿನ್ನ ವೆಚ್ಚಕ್ಕೇನೇ ಬೇಕಾದರೆ ನಾನೇನು ಮಾಡುವುದು? ಸಾಲಮಾಡುವುದೇ?

**ಲೀಲಾ**—ಸಾಲವಾದರೆ ಸಾಲಮಾಡಿ ಅಗತ್ಯಬೇಕಾದ್ದಕ್ಕೆ ಖರ್ಚುಮಾಡ ದಾಗುವುದೇ?

**ಪ್ರಭಾಕರ**—ನನ್ನಿಂದದು ಸಾಧ್ಯವಿಲ್ಲ.

**ಲೀಲಾ**—ನೀವೀಗ ಒಂದು ಮಾತು ಹೇಳಿದಿರೆಂದರೆ ಸಾವಿರಗಟ್ಟ ಹಣ ಕೊಡುವವರಿಲ್ಲವೇ?

**ಪ್ರಭಾಕರ**—ಯಾರು?

**ಲೀಲಾ**---ಸದಾ ನಿಮ್ಮ ಆಶ್ರಯಬೇಕಾಗಿರುವ ವಕೀಲರು.

**ಪ್ರಭಾಕರ**---ಸರಿ, ಸರಿ. ಡಿಸ್ಟ್ರಿಕ್ಟ್ ಜಡ್ಜನಾಗಿ ನಾನು ನನ್ನ ಕೋರ್ಟಿಗೆ ಬರುವ ವಕೀಲರಿಂದ ಹಣ ಸಾಲಪಡೆದರೆ ಒಳ್ಳೇ ಗೌರವದಿಂದ ಕೆಲಸಮಾಡ ಬಹುದು! ನ್ಯಾಯವನ್ನೂ ನಿರ್ದಾಕ್ಷಿಣ್ಯವಾಗಿ, ನಿಷ್ಪಕ್ಷಪಾತವಾಗಿ ತೀರ್ಮಾನಿಸ ಬಹುದು!

**ಲೀಲಾ**—ಬೆಂಕಿಬೀಳಲಿ ಯಾವ ಕೆಲಸಕ್ಕೂ ಬಾರದ ನಿಮ್ಮ ಗೌರವಕ್ಕೆ! ಮಾನ್ಯ ಲೋಮೆಂಬರರಿಗೆ ಸಂಭ್ರಮದ ಡಿನ್ನರ್ ಪಾರ್ಟಿ ಕೊಟ್ಟರೆ ಎಷ್ಟು ಗೌರವವೆಂಬುದನ್ನು ಬಲ್ಲಿರಾ?

**ಪ್ರಭಾಕರ**—ಸಾಲಮಾಡಿ ಡಿನ್ನರ್‌ಪಾರ್ಟಿ ಕೊಡುವುದೇ? ಒಳ್ಳೆ ಬುದ್ಧಿ ಹೇಳುತ್ತೀ ನೀನು! ನನ್ನಿಂದದು ಎಷ್ಟು ಮಾತ್ರಕ್ಕೂ ಸಾಧ್ಯವಿಲ್ಲ.

**ಲೀಲಾ**—ಹಾಗಾದರೆ ಏನು ಮಾಡುವುದು ಡಿನ್ನರ್ ಪಾರ್ಟಿಯ ವೆಚ್ಚಕ್ಕೆ?

**ಪ್ರಭಾಕರ**—ನನ್ನೊಡನೇನು ಕೇಳುವುದು? ಅದು ಕೂಡ ಈಗ ತಿಂಗಳ ಅಂತ್ಯ.

**ಲೀಲಾ**—ತಿಂಗಳಾರಂಭಕ್ಕೆ ಬಿಡಿಸುವಿರಾದರೆ ನನ್ನ ಸರವನ್ನಾದರೂ ಒತ್ತೆ ಯಿಡಿಸಿ ಹಣ ತರಿಸಿ. ಕನಿಷ್ಟಪಕ್ಷ ರೂ. ೮೦೦ ಆದರೂ ಬೇಕು.

**ಪ್ರಭಾಕರ**—೮೦೦! ಏತಕ್ಕಾಗಿ?

**ಲೀಲಾ**—೮೦೦ ಕೂಡ ಸಾಕಾಗುವುದು ಕಷ್ಟ! ಮತ್ತೆ ಡಿನ್ನರ್‌ಪಾರ್ಟಿ ಯೆಂದರೆ ಸುಮ್ಮಗಾಗುವುದೆ? ಮದ್ರಾಸಿನ 'ಹೆರಿಸನ್ ಎಂಡ್ ಕೋ'ದಿಂದ ಸ್ಪೆಶ್ಯಲಾಗಿ ತಿಂಡಿತಿನಿಸುಗಳನ್ನು ತರಿಸಬೇಕು. ಕನಿಷ್ಟಪಕ್ಷ ೩೦೦ ಮಂದಿ ಯನ್ನಾದರೂ ಆಮಂತ್ರಿಸಬೇಕು.

**ಪ್ರಭಾಕರ**—ಆಗಲಿ, ಘಂಟೆ ಹನ್ನೊಂದು ಆಯಿತು. ನಾನು ಮಲಗುತ್ತೇನೆ. (**ಆರಾಮ ಕುರ್ಚಿಯಿಂದ ಜಗ್ಗನೆದ್ದು ಮಲಗುವ ಸನ್ನಾಹಮಾಡುವನು.**)

**ಲೀಲಾ**—ಹನ್ನೊಂದಾದರೇನಾಯಿತು? ಕೂತುಕೊಳ್ಳಪ್ಪ ಕೂತುಕೊಳ್ಳಿ, ಸ್ವಲ್ಪ ಮಾತಾಡುವ. (**ಪ್ರಭಾಕರರಾಯರ ತೋಳು ಹಿಡಿವೆಳೆಯುವಳು**)

**ಪ್ರಭಾಕರ**—ಛೆ! ಛೆ! ನನಗೆ ಬೆಳಿಗ್ಗೆ ಬೇಗ ಏಳಬೇಕು. ಒಂದು ಜಜ್ಜ್‌ ಮೆಂಟ್ ಬರೆಯಲಿದೆ. (**ಹೋಗುವನು ಲೀಲೆಯೂ ಹೋಗುವಳು.**)

---

# ೧೫ನೇ ದೃಶ್ಯ—ಬೀದಿ

[ಮಂಗಳೂರಿನ ರೈಲ್ವೆ ಸ್ಟೇಶನಿನ ಬಳಿಯ ರಸ್ತೆಯ ಬದಿಯಲ್ಲಿ ಅಮೃತರಾಯನು ಕಾಸರಗೋಡಿಗೆ ಹೋಗುವ ಸಂಜೆಯ ಟ್ರೈನನ್ನು ಕಾಯುತ್ತಾ ನಿಂತಿರುವನು]

**ಅಮೃತರಾಯ—**(ಸ್ವಗತ) ಈ ಕಾಲದಲ್ಲಿ ಎಷ್ಟು ಬುದ್ಧಿವಂತಿಕೆಯಿದ್ದರೂ ಸಾಕಾಗುವುದಿಲ್ಲಪ್ಪ! ನಾನೇ ಎಲ್ಲರಿಗಿಂತ ಬುದ್ಧಿವಂತನೆಂದು ಎಣಿಸಿದ್ದೆ. ಈ ಮುಕುಂದರಾಯ ಗಾಸಿಕೊಟ್ಟನಲ್ಲ ನನಗೆ! ರಿಟಯರ್ಡ್ ಸಬ್‌ಜಡ್ಜ್, ಗೌರವದ ಜನ, ಹಾಗೆಲ್ಲಾ ಮೋಸಮಾಡ್ಲಿಕ್ಕಿಲ್ಲವೆಂದು ನಾನು ನಂಬಿ ಕೆಟ್ಟೆ. ಹಣದ ವಿಷಯದಲ್ಲಿ ಹುಟ್ಟಿಸಿದ ಅಪ್ಪನನ್ನು ಕೂಡ ನಂಬಬಾರದೆಂಬುದು ವಾಸ್ತವ, ವಾಸ್ತವ. ಕಲ್ಲೂ ಕಲ್ಲು ಮತ್ತೂ ಹೊಂಡಕ್ಕೆ ಬೀಳುವುದಾಯಿತಲ್ಲ ಇದು! ಮುಕುಂದರಾಯರು ರೂ. 500 ಕೊಟ್ಟೊಡನೆ ಈ ತುಚ್ಛ ವ್ಯಾಪ್ತಿಯನ್ನು ಬಿಟ್ಟು ಚಂದದ ಹುಡುಗಿಯೊಬ್ಬಳನ್ನು ಮದುವೆಮಾಡಿಕೊಂಡು ಬೀಡಾಬೀಡಿ ಸಿಗರೇಟಿನ ಚಿಕ್ಕ ಅಂಗಡಿಯನ್ನಿಟ್ಟು ಸ್ವತಂತ್ರವಾಗಿ ಸಂಸಾರ ನಡಿಸಬೇಕೆಂದಿದ್ದೆ. ಯಾಕಂದ್ರೆ ಈಗ ಬೀಡಾ ಬೀಡಿ ಸಿಗರೇಟಿನ ವ್ಯಾಪಾರದಷ್ಟು ಲಾಭ ಇನ್ನಾವುದರಲ್ಲಿಯೂ ಇಲ್ಲ. ಹಾಗಂತ ಹೆಚ್ಚು ಭಂಡವಾಳವೂ ಬೇಡ. ಬೇರೆ ಯಾವ ವ್ಯಾಪ್ತಿಗಿಂತಲೂ ಅದೇ ಉತ್ತಮವೆಂದು ನೆನಸಿದ್ದೆ. ಆದರೆ ಅದೆಲ್ಲಾ ಈಗ ತಿರುಕನ ಸ್ವಪ್ನದಂತಾಯಿತಲ್ಲ! ನಾನು ಈ ಮುಕುಂದರಾಯನ ಹಣ ನಂಬಿ ಒಂದು ಹುಡುಗಿಯನ್ನು ಕೂಡ ನೋಡಿಟ್ಟಿದ್ದೆ. ಅದೆಲ್ಲಾ ಈಗ ಮನಸ್ಸಿನ ಮಂಡಿಗೆಯಾಗಿ ಹೋಯಿತಲ್ಲ. ಈಗೇನು ಮಾಡುವುದು? ಪಾಪ ನಿರ್ದೋಷಿಯಾದ ಆ ಸುಧೆಯ ಜೀವನ ಕೆಡಿಸಿದ್ದೆ ಬಂತಲ್ಲ ನನಗೆ ಈ ಮುದುಕನ ಮಾತು ಕೇಳಿ? ಅವಳ ಗತಿಯೇನಾಗಿರುವುದೋ ಪಾಪ! (ಯೋಚಿಸಿ) ಇಂದೀಗ ಶಟ್ಲ್ ಟ್ರೈನಿನಲ್ಲಿ ಕಾಸರಗೋಡಿಗೆ ಹೋಗಿ ಮುಕುಂದರಾಯನೊಡನೆ ಕೊನೆಯ ಸಲ ಒಂದು ಮಾತು ಕೇಳುವೆನು. ಅವನು ಹಣ ಕೊಟ್ಟ್ರೆಕೊಟ್ಟ; ಇಲ್ಲವಾದರೆ ಸುಧೆಯು ನಿರ್ದೋಷಿ ಮತ್ತು ನಿಷ್ಕಳಂಕಳೆಂಬುದನ್ನು ಸಿದ್ಧಗೊಳಿಸಿ ಪ್ರಭಾಕರರಾಯರಿಗೆ ಕಾಗದಬರೆದು ನಾನು ಮಾಡಿದ ಪಾಪದ ಭಾರವನ್ನು ಸ್ವಲ್ಪವಾದರೂ ಇಳಿಸಿಕೊಳ್ಳುವೆನು.

---

# ೧೬ನೇ ದೃಶ್ಯ—ಮನೆ

[ಬಳ್ಳಾರಿ ಪಟ್ಟಣದ ಹೊರವಳಯದ ಚಿಕ್ಕ ಮನೆಯೊಂದರಲ್ಲಿ ರಾತ್ರಿ ಊಟವಾದ ನಂತರ ಸುಧೆಯೂ ಕೊರಗನೂ ಮನೆಜಗಲಿಯ ಮೇಲೆ ಕುಳಿತು ಮಾತಾಡುತ್ತಿರುವರು.]

**ಸುಧಾ**—ಎಲ್ಲಿ ಹೋದರೂ ದುರಾತ್ಮರು ನಮ್ಮನ್ನು ಸುಖವಾಗಿರ ಬಿಡುವಂತಿಲ್ಲ. ಮೈಸೂರಿಗಿಂತಲೂ ಕೆಟ್ಟ ರಾಜ್ಯವೆಂದು ತೋರುತ್ತದೆ ಇದು. ಹೋದಲ್ಲೆಲ್ಲಾ ದುರ್ವಿಧಿಯು ನನಗಿಂತ ಮೊದಲೇ ಹೋಗಿ ನಿಲ್ಲುವುದು. ನನ್ನನ್ನು ನೀವು ಕಟ್ಟಿಕೊಂಡಿರುವ ವರೆಗೆ ನಿಮಗೆ ಎಂದೆಂದಿಗೂ ಸುಖ ದೊರೆಯದು. ದಿನ ದಿನ ದುಡಿದು ಸುಖವಾಗಿ ಜೀವನ ನಡಿಸುತ್ತಿದ್ದ ನೀವೇಕೆ ಮಂಗಳೂರು ಬಿಟ್ಟು ಈ ಹತಭಾಗ್ಯೆಯೊಂದಿಗೆ ಬಂದಿರೋ ತಿಳಿಯದು!

**ಕೊರಗ**— ಏನು, ಏನು ಸಂಗತಿ ಹೇಳಿ!

**ಸುಧಾ**—ಯಾರೋ ಇಲ್ಲಿಯ ಒಬ್ಬ ದೊಡ್ಡ ಮನುಷ್ಯರ ಮಗನಂತೆ. ನಮ್ಮ ಮನೆಗೆ ಬಂದ, ನಮ್ಮ ಕುರಿತೆಲ್ಲಾ ವಿಚಾರಿಸಿದ. ಮಗು ಯಾರದೆಂದು ಕೇಳಿದ.

**ಕೊರಗ**—(ಕೋಪೋದ್ರೇಕದಿಂದ) ಕುತ್ತಿಗೆಗೆ ಕೈಹಾಕಿ ದೊಬ್ಬಬೇಕಿತ್ತು ಅವನನ್ನು ಹೊರಗೆ! ಅವನಿಗೇನು ನಮ್ಮ ಮನೆಯಲ್ಲಿ ಕೆಲಸ? ನಾನಿರಬೇಕಿತ್ತು! ಚೆನ್ನಾಗಿ ಬುದ್ಧಿ ಕಲಿಸುತ್ತಿದ್ದೆ ಆ ಘಟಿಂಗನಿಗೆ!

**ಸುಧಾ**— ಸ್ವಲ್ಪ ಮೆಲ್ಲಗೆ ಮಾತಾಡಿ. ಅವನ ಮನೆ ಇಲ್ಲಿಯೇ ಸಮೀಪವಿರುವುದಂತೆ; ಇಲ್ಲಿಯ ಜನರೆಲ್ಲಾ ಅವನೆಂದರೆ ಗಡಗುಟ್ಟಿ ನಡುಗುತ್ತಾರೆ. ಅವನೇನು ಮಾಡಲಿಕ್ಕೂ ಹಿಂಜರಿಯುವವನಲ್ಲವಂತೆ.

**ಕೊರಗ**—ಸಾಕು ಸಾಕು, ಅವನಾರಾದರೆ ನಮಗೇನು? ನಮ್ಮ ಮನೆಯಲ್ಲವನಿಗೆ ಕೆಲಸವೇನು?

**ಸುಧಾ**—ನಾನೂ ಜೋರುಮಾಡಿದೆ; ಕೂಡಲೆ ಮನೆಬಿಟ್ಟು ಹೋಗಬೇಕೆಂದೆ. ಅವ ಒಳಹೋಗ ನೋಡಿದ.

**ಕೊರಗ**—ಒಳಗೆ ಹೋಗುತ್ತಿದ್ದರೆ ಕತ್ತಿ ಇರಲಿಲ್ಲವೋ ಒಳಗೆ?

**ಸುಧಾ**—ಎಂಥ ಜನರಪ್ಪಾ ಈ ಊರವರು! ನಾನು ಬೊಬ್ಬೆಹಾಕಿದಾಗ ಒಬ್ಬರಾದರೂ ಬರಬೇಕೋ? ಪುಣ್ಯಕ್ಕೆ ಅವನೇ ಅದೇಕೋ ಗಾಬರಿಗೊಂಡು

ಹೋಗಿಬಿಟ್ಟ. ಇಲ್ಲವಾದರೆ ಏನಾಗುತ್ತಿತ್ತೊ? ಅವ ಇಲ್ಲಿಯ ದೊಡ್ಡ ವ್ಯಾಪಾರಿ ಶಾಂತಪ್ಪನವರ ಒಬ್ಬನೇ ಮಗನಂತೆ. ಪ್ರಥಮವಾಗಿ ನಮ್ಮ ನೆರೆಮನೆಯ ರುದ್ರವ್ವನನ್ನು ಕಳುಹಿಸಿ, ನನಗೆ ನಾನಾಬಗೆಯ ಆಶೆತೋರಿಸಿ ಒಲಿಸಿಕೊಳ್ಳ ಲೆತ್ನಿಸಿದ. ಆ ಮೇಲೆ ನಮ್ಮ ಮನೆಯ ಸುತ್ತಲೆಲ್ಲಾ ಕೆಲಜನರೊಂದಿಗೆ ಅಡ್ಡಾಡತೊಡಗಿದ. ಮೊನ್ನೆ ನೆಟ್ಟಗೆ ಮನೆಗೆ ಬಂದು ಜಗಲಿಯಲ್ಲಿದ್ದ ಮಗು ವನ್ನು ಹಿಡಿದು ಅದಕ್ಕೇನೋ ತಿನ್ನಲಿತ್ತು ಅದನ್ನಾಡಿಸತೊಡಗಿದ. ನಾನು, "ನಿಮಗೇನು ಕೆಲಸ ಇಲ್ಲಿ?" ಎಂದು ಗದರಿಸಿದಾಗ ನಕ್ಕು ಹೋಗಿಬಿಟ್ಟ. ಇಂದೀಗ ಅವನೇನಾದರೂ ಬಲಾತ್ಕಾರಮಾಡಿ ಒಳಗೆ ಬರುತ್ತಿದ್ದರೆ........

**ಕೊರಗ**—ಈ ಸಂಗತಿಯನ್ನೆಲ್ಲಾ ನನಗೇಕೆ ತಿಳಿಸಲಿಲ್ಲವಮ್ಮಾ?

**ಸುಧಾ**—ನಿಮಗೆ ಯಾವಾಗಲೂ ನಾನೆಷ್ಟು ವ್ಯಥೆಯನ್ನುಂಟುಮಾಡುವು ದೆಂದು ತಿಳಿಸಲಿಲ್ಲ.

**ಕೊರಗ**—ಶಾಂತಪ್ಪನವರು ಬಹಳ ಒಳ್ಳೆಯವರಂತೆ. ಈ ಊರಿನ ದೊಡ್ಡ ಶ್ರೀಮಂತರಲ್ಲೊಬ್ಬರಂತೆ. ಅವರಿಗೊಮ್ಮೆ ಈ ಸಂಗತಿ ತಿಳಿಸಿ ನೋಡಬೇಕು.

**ಸುಧಾ**—ಅವ ಯಾರ ಮಾತನ್ನೂ ಕೇಳುವವನಲ್ಲವಂತೆ. ಅವನ ಉಪಟಳ ದಿಂದ ಈ ಕೇರಿಯ ರೂಪವಂತ ಬಡ ಸ್ತ್ರೀಯರಾರೂ ಮಾನವಿಟ್ಟುಕೊಂಡಿರ ಲಿಕ್ಕಿಲ್ಲವಂತೆ. ಅವನ ಸುದ್ದಿಯೆತ್ತುವುದೆಂದರೆ ಹೆದರುತ್ತಾರೆ ನಮ್ಮ ನೆರೆ ಕರೆಯವರೆಲ್ಲ!

**ಕೊರಗ**—ನಾನಿರಬೇಕಿತ್ತು. ಬಡವರು ಮಾನ ಕಾಪಾಡಿಕೊಳ್ಳುವ ರೀತಿ ಯನ್ನು ತೋರಿಸುತ್ತಿದ್ದೆ ಆ ನೀಚನಿಗೆ! ಧನಮದದಿಂದ ಈ ದುರಾತ್ಮರು ಮಾಡುವ ಅನಾಚಾರಗಳನ್ನು ಮೂಕ ಪಶುಗಳಂತೆ ತಾಳಿಕೊಂಡು ಸುಮ್ಮ ನಿರುವುದರಿಂದಲೇ ಅವರು ಕೊಬ್ಬಿ ಹೆಚ್ಚು ಹೆಚ್ಚಾಗಿ ಸ್ವೇಚ್ಛಾಚಾರಿಗಳಾಗಿ ನಡೆಯುತ್ತಿದ್ದಾರೆ. ಪ್ರಾಣದ ಹಂಗುದೊರೆದಾದರೂ ಮಾನವನ್ನು ಕಾಯ್ದು ಕೊಳ್ಳುವ ಅಭಿಮಾನವು ಬಡವರಲ್ಲಿದ್ದರೆ ಅವರ ಆಟ ನಡೆಯುವ ಚಂದ ನೋಡಬಹುದಿತ್ತು!

**ಸುಧಾ**—ಅಪ್ಪಾ, ನೀವೇಕೆ ಇಷ್ಟೊಂದು ಆಕ್ರೋಶಗೊಳ್ಳುವುದು? ಮಾನ ಧನಳಾದ ಅಭಿಮಾನಿನಿಯ ಮಾನಾಪಹಾರಮಾಡಲು ಯಾರಿಂದಲೂ ಸಾಧ್ಯ ವಿಲ್ಲ. ಆ ವಿಷಯವಂತಿರಲಿ, ನನಗೇನಾದರೂ ಕೆಲಸ ಮಾಡಿಸಿಕೊಡಿರೆಂದು

ಎಷ್ಟು ಸಲ ಹೇಳಿದೆ ನಿಮ್ಮೊಡನೆ? ನೀವಾ ಕುರಿತು ಗಮನಕೊಡುವುದೇ ಇಲ್ಲವಲ್ಲ? ಜಕ್ಕಜವ್ವನೆಯಾದ ನಾನು ಸುಮ್ಮಗೆ ಮನೆಯೊಳಗೆ ಕುಳಿತು ಸಮಯ ಕಳೆಯುವುದು; ಪ್ರಾಯಹೋದ ನೀವು ದಿನ ಇಡೀ ಕೆಲಸಮಾಡು ತ್ತಿರುವುದು; ಇದಾವ ನ್ಯಾಯ?

**ಕೊರಗ**—ನಿಮ್ಮಿಂದ ಯಾವ ಕೆಲಸವಾದೀತಮ್ಮ? ಅದು ಹೊರತು, ಮನೆಯೊಳಗಿರುವಾಗಲೇ ನಿಮಗೆ ದುರಾತ್ಮರ ಉಪಟಳ ತಪ್ಪದಿರುವಾಗ ಇನ್ನು ಹೊರಗೆ ಹೋದರೆ ಹೇಗೆ?

**ಸುಧಾ**—ಆ ಚಿಂತೆಯೇ ನಿಮಗೆ ಬೇಡ. ಇಷ್ಟರ ವರೆಗೆ ಮಗು ಚಿಕ್ಕ ದೆಂದಾಯಿತು. ಇನ್ನೇನೂ ತೊಂದರೆಯಿಲ್ಲ. ನಾನು ಕೆಲಸಕ್ಕೆ ಹೋಗುವೆನು. ಹೊಸತಾಗಿ ಬಂದ ಡಿಸ್ಟ್ರಿಕ್ಟ್ ಜಡ್ಜರು ಬಹಳ ಒಳ್ಳೆಯವರಂತೆ. ಅವರ ಮನೆ ಕೆಲಸಕ್ಕೆ ಯಾರಾದರೂ ಕೆಲಸದವಳು ಬೇಕೋ ವಿಚಾರಿಸಿರಿ.

**ಕೊರಗ**—ಅದೆಷ್ಟಕ್ಕೂ ಸಾಧ್ಯವಿಲ್ಲಮ್ಮಾ. ನನ್ನ ಕೈಕಾಲು ಗಟ್ಟಿ ಇರುವ ವರೆಗೆ ನೀವು ಯಾರ ಚಾಕರಿಮಾಡುವ ಆವಶ್ಯಕತೆಯೂ ಇಲ್ಲ.

**ಸುಧಾ**—ಏನು ಮಾತಿದಪ್ಪಾ ನಿನ್ನದು? ನಾನು ಯಾವಾಗಲೂ ಹೀಗೆಯೇ ಇರಲು ಸಾಧ್ಯವಿದೆಯೇ? ನೀವು ಎಷ್ಟರವರೆಗೆ ನನ್ನನ್ನು ಪೋಷಿಸಬಲ್ಲಿರಿ? ಈಗಲೇ ಏನಾದರೂ ಕೆಲಸಮಾಡಿ ಕೂಡಿದಷ್ಟು ಉಳಿಸಿದರೆ ಮುಂದೆ ಮಗು ವಿನ ಖರ್ಚಿಗಾದರೂ ಆಗಲಾರದೇ? ದೊಡ್ಡ ಅಧಿಕಾರಿಗಳ ಕೆಲಸ ಸಿಕ್ಕಿದರೆ ಬಹಳ ಒಳ್ಳೇದು.

**ಕೊರಗ**—ಈಗಿನ ಜಡ್ಜರೇನೋ ಒಳ್ಳೆಯವರಂತೆ. ಎಲ್ಲವರೂ ಹೊಗಳು ತ್ತಾರೆ. ಆದರೆ ಅವರ ಹೆಂಡತಿ ಬಹಳ ಜೋರಿನವರಂತೆ. ಬಂದೀಗ ಒಂದು ತಿಂಗಳಾಗಲಿಲ್ಲ,—ಇಬ್ಬರು ಹೆಂಗಸರಾಯಿತಂತೆ ಕೆಲಸಕ್ಕೆ. ಪೇದೆಗಳೆಲ್ಲಾ ಬೊಬ್ಬೆಹಾಕುತ್ತಿದ್ದಾರೆ. ಗಂಡನನ್ನು ಒಂಟಿಗಾಲಲ್ಲಿ ನಿಲ್ಲಿಸುತ್ತಾರಂತೆ ಕೋಪ ಬಂದರೆ. ಈಗ ಅಂತಹ ಆವಶ್ಯವೇನೂ ಬಂದಿಲ್ಲ. ನೀವೆಂದಿಗೂ ಕೆಲಸಕ್ಕೆ ಹೋಗಬಾರದಮ್ಮಾ. ನಾನು ದುಡಿದುದು ಸಾಕು. ಮಗುವಿನ ಮುಂದಿನ ವೆಚ್ಚಕ್ಕೆ ನಿಮ್ಮ ಹಣ ಹಾಗೆಯೇ ಇವೆ.

**ಸುಧಾ**—ಏನು! ನನ್ನ ಹಣ ಹಾಗೆಯೇ ಇವೆಯೇ? ನಾನದನ್ನು ಹಾಗೆಯೇ ಇಡಕೊಟ್ಟುದೇ? ಅಹ, ನೀವು ದಿನ ಇಡೀ ದುಡಿದು ನನ್ನ ಹೊಟ್ಟೆ ತುಂಬಿಸ

ವ್ಯಭಿಚಾರಿಣಿ ಯಾರು



ಬಸಪ್ಪ (ಕುಡುಕ) | ಅಮೃತರಾವ್ (ವೈರಾಗ್ಯತಾಳಿದ ಭಿಕ್ಷು) | ಕೊರಗ (ಸ್ವಾಮಿನಿಷ್ಠ ಸೇವಕ)

ಬೇಕೇ? ನಾನು ಕಡ್ಡಿಮುರಿಯದೆ ಸುಮ್ಮನೆ ಮನೆಯೊಳಗೆ ಬಿದ್ದುಕೊಂಡಿರಬೇಕೇ?

**ಕೊರಗ**—ಏನು ಮಾತಿದಮ್ಮಾ? ನಮ್ಮ ಹಣ ನಿಮ್ಮ ಹಣವೆಂದು ಭೇದವಿದೆಯೇ? ನನ್ನನ್ನು ನೀವು 'ಅಪ್ಪಾ' ಎಂದು ಕರೆಯುವುದು ಬರಿಯ ನಟನೆಯೇ?

**ಸುಧಾ**—ಅಪ್ಪಾ, ಹಾಗೆಣಿಸಬೇಡಿ, ಕ್ಷಮಿಸಿರಿ ಕ್ಷಮಿಸಿರಿ. **(ಕಣ್ಣೀರಿಡುವಳು)**

**ಕೊರಗ**—**(ಕಣ್ಣೀರು ತುಂಬಿಬರಲು ಫಕ್ಕನೆ ತಡೆಗಟ್ಟಿ)** ಅಮ್ಮಾ ದುಃಖಿಸಬೇಡಿ ದುಃಖಿಸಬೇಡಿ. ಹೋಗಿ ಮಲಗಿರಿ. ರಾತ್ರಿ ಬಹಳವಾಯಿತು. ಇಬ್ಬರೂ ದೀಪ ನಂದಿಸಿ ಮಲಗುವರು. **(ಸ್ವಲ್ಪ ಹೊತ್ತಿನಲ್ಲಿ ಹೊರಗಿಂದ ಡಬ್ಬನೆ ಬಾಗಿಲಿಗೆ ಹೊಡೆಯುವ ಶಬ್ದವಾಗುವುದು. ಕೊರಗನು ಎಚ್ಚತ್ತು)**

**ಕೊರಗ**—"ಯಾರದು?" **(ಗಟ್ಟಿಯಾಗಿ ಕೂಗಿ, ಎದ್ದು ಬೆಂಕಿಕಡ್ಡಿ ಕೀರಿ ದೀಪ ಹಚ್ಚುವನು. ಅಷ್ಟರಲ್ಲಿ ಸುಧೆಯು ಎಚ್ಚತ್ತು ದಿಗಿಲುಗೊಂಡು)**

**ಸುಧಾ**—"ಏನು? ಏನು?"

**ಕೊರಗ**—"ಏನಿಲ್ಲ, ನೀವು ಸ್ವಸ್ಥ ಮಲಗಿ" **(ಎನ್ನುವಷ್ಟರಲ್ಲಿ ಪುನಃ ಬಾಗಿಲೇ ಒಡೆಯುವುದೋ ಎಂಬಷ್ಟು ಜೋರಿನಿಂದ ಬಡಬಡ ಬಡಿದು ಬಾಗಿಲು ದೂಡಲ್ಪಡುವುದು. ಆಗ ಸುಧೆಯು ಮಗುವು ಎಚ್ಚತ್ತು ಕೂಗುವುದು. ಸುಧೆಯು ಅದನ್ನು ಸಂತೈಸುವಳು. ಕೊರಗನು ಚಿಮಣಿ ಹಿಡಕೊಂಡು ಮಲಗುವ ಕೋಣೆಗೆ ತಾಗಿಯೇ ಇರುವ ಅಡಿಗೆಕೋಣೆಗೆ ಹೋಗಿ ಕತ್ತಿಯೊಂದನ್ನು ಹಿಡಕೊಂಡು ಒಡನೆಯೇ ಬಾಗಿಲುತೆರೆದು ಕೋಪೋದ್ರೇಕದಿಂದ ಗಡಗಡ ನಡುಗುತ್ತಾ, 'ಹೊಸ್ತಿಲಲ್ಲಿ ಅಡ್ಡ ನಿಲ್ಲುವನು. ಆಗ ಸಿದ್ಧಪ್ಪ ಮತ್ತು ಅವನ ಸಂಗಾತಿಗಳಿಬ್ಬರು ಮುಂದೊತ್ತಿ ಬರುವರು' ಕೊರಗನ ಕೈಯಲ್ಲಿರುವ ಕತ್ತಿಯನ್ನು ಕಂಡು ಸ್ವಲ್ಪ ಹಿಂದೆ ಸರಿಯುವರು.)**

**ಕೊರಗ**—ಮುಂದೆ ಬಂದರೆ ಜಾಗ್ರತೆ, ಕಡಿದುಹಾಕುವೆನು! ಏನಿದು ನಿಮ್ಮ ಲೂಟಿ? ನಿಮ್ಮನ್ನಾರೂ ಕೇಳುವವರಿಲ್ಲವೇ?

**ಸಿದ್ಧಪ್ಪ**—ಹುಂ, ನಮ್ಮನ್ನು ಕೇಳುವವರು ಈ ಊರಲ್ಲಾರೂ ಇಲ್ಲ. ನಮ್ಮದೇ ರಾಜ್ಯ ಇಲ್ಲಿ. ಒಳ್ಳೇ ಮಾತಿನಿಂದ ಸುಧೆಯನ್ನು ನಮಗೊಪ್ಪಿಸಿದೆಯಾದರಾಯಿತು! ಇಲ್ಲವಾದರೆ ಬಲಾತ್ಕಾರದಿಂದೊಯ್ಯುವೆವು!

**ಬಸಪ್ಪ**—ಎಲೋ ಮುದುಕ, ಯಾಕೆ ಸಾಯುತ್ತಿ ಸುಮ್ಮನೆ ನಮ್ಮ ಕೈಗೆ ಸಿಕ್ಕಿ? ನಿನ್ನ ಮಗಳನ್ನು ನಮ್ಮೊಡೆಯನಿಗೊಪ್ಪಿಸಿದರೆ ನಿನಗೆ ಬೇಕಷ್ಟು ಹಣ ಸಿಗುವುದು. ಆ ಮೇಲೆ ನಿಮ್ಮ ಸುಖಕ್ಕೇನೂ ಕೊರತೆ ಇರಲಾರದು.

**ಕೊರಗ**—ಆ ಸುಖ ನಿಮ್ಮಂಥವರಿಗೇನೇ ಇರಲಿ. ನನಗೆ ಬೇಡ. ನಿಮ್ಮೊಡೆಯ ದೊಡ್ಡವರಾದರೆ ಅವರಿಗಾಯಿತು. ಇಲ್ಲೇನಾದರೂ ತಪ್ಪಿ ನಡೆದರೆ ಪರಿಣಾಮ ಕೆಟ್ಟದಾದೀತು; ಜಾಗ್ರತೆ!

**ಬಸಪ್ಪ**—ನಮ್ಮೊಡೆಯನಿಗೆ ಎದುರುನಿಂತು ಬದುಕಿದವರು ಈ ಊರಲ್ಲಾರೂ ಇಲ್ಲ. ಬೇಕಾದರೆ ನಿನ್ನ ನೆರೆಕರೆಯವರೊಡನೆಲ್ಲಾ ವಿಚಾರಿಸಿಕೋ. ಸುಮ್ಮನೆ ಛಲ ಹಿಡಿದರೆ ಪ್ರಾಣಕ್ಕೆ ಸಂಚಕಾರ ಬಂದೀತು ನೋಡಿಕೊ.

**ಸಿದ್ಧಪ್ಪ**—ಸುಧೆಯನ್ನೀಗ ಒಪ್ಪಿಸುವೆಯೋ ಇಲ್ಲವೋ?

**ಕೊರಗ**—ಒಪ್ಪಿಸುವುದಂತಿರಲಿ, ನನ್ನಲ್ಲಿ ಪ್ರಾಣವಿರುವನಕ ದುರಾತ್ಮರಾದ ನಿಮಗೆ ಅವರ ಸಮೀಪ ಕೂಡ ಹೋಗಲು ಸಾಧ್ಯವಿಲ್ಲ.

**ಸಿದ್ಧಪ್ಪ**—ಒಹೊ, ದೊಡ್ಡ ಅಮ್ಮ ನಿನ್ನ ಮಗಳು ಮೂರು ಕಾಸಿನವಳು!

**ಕೊರಗ**—ನೀಚಾ, ಮನಸ್ಸಿಗೆ ಬಗುಳಬೇಡ. ನಿನ್ನ ನಾಲಿಗೆಯನ್ನೀಗ ಕತ್ತರಿಸಿ ಹಾಕುವೆನು.

**ಸಿದ್ಧಪ್ಪ**—ಏನು, ನಾಲಿಗೆಯನ್ನು ಕತ್ತರಿಸಿ ಹಾಕುವೆಯಾ? (ಕೊರಗನ ಮೇಲೆ ಬೀಳಲು ಧಾವಿಸಿ ಬರುವನು. ಅವನ ಸಂಗಾತಿಗಳು ಹಿಂಜರಿದು ಹಿಂದೆ ನಿಲ್ಲುವರು. ಕೊರಗನು ಕ್ರೋಧೋನ್ಮತ್ತನಾಗಿ ಕತ್ತಿ ಬೀಸುವನು. ಕತ್ತಿಯ ಪೆಟ್ಟು ಸರಿ ಕುತ್ತಿಗೆಗೆ ತಾಗಿ ಕುತ್ತಿಗೆ ಕೊಯ್ಯಲ್ಪಟ್ಟು ಸಿದ್ಧಪ್ಪನು ದೊಪ್ಪನೆ ನೆಲಕ್ಕುರುಳುವನು. ಆತನ ಸಂಗಾತಿಗಳಿಬ್ಬರೂ ಕೂಡಲೆ ಓಡಿಹೋಗುವರು.)

**ಕೊರಗ**—ದುರಾಚಾರಿಗಳ ಗತಿಯೇ ಇದು! (ಒಳಹೊಕ್ಕು ಕತ್ತಿಯನ್ನೊಂದೆಡೆ ಬಿಸಾಡಿ) ಸುಧಾ, ನನಗೆ ಸ್ವಲ್ಪ ನೀರು ಕೊಡು. ಜೀವಸಂಕಟವಾಗುವುದು. (ಗೋಡೆಗೊರಗಿ ಕೂತುಕೊಳ್ಳುವನು)

**ಸುಧಾ**—(ಛಲ ಹಿಡಿದು ಕೂಗುವ ಮಗುವನ್ನು ಒತ್ತಟ್ಟಿಗೆ ಬಿಟ್ಟು ಓಡಿ ಬಂದು ಕೊರಗನ ತೋಳು ಹಿಡಿದು) ಅಪ್ಪಾ! ಏನಾಯಿತು! ಆಹ! ಈ ಪಾಪಿ ದೇಹವನ್ನೇಕೆ ದೇವರಿನ್ನೂ ಇಟ್ಟಿರುವನು! ಅಪ್ಪಾ! ಅಪ್ಪಾ! ಅಪ್ಪಾ! (ಭುಜ ಹಿಡಿದು ಕುಲುಕುವಳು. ಕೊರಗನಿಗೆ ಬೋಧತಪ್ಪಿ ಹೋಗಿದಿತು.) ಅಹ! ಏನಾಯಿತು ಅಪ್ಪನಿಗೆ! ಅಯ್ಯೋ! (ಚಾಪೆಯನ್ನೆಳೆದು ಕೊರಗನನ್ನು ಅದರ ಮೇಲೆ ಮಲಗಿಸಿ ಓಡಿಹೋಗಿ ನೀರು ತಂದುಕೊಟ್ಟು ಕಣ್ಣೀರಿಳಿಸುತ್ತಾ ಸೆರಗಿಂದ ಗಾಳಿ ಹಾಕುವಳು ಕೊರಗನ ಮುಖದ ಮೇಲೆ ನೀರು ಚುಮುಕಿಸಿ ಸೆರಗಿಂದ ಒರಸಿ ಪುನಃ ಗಾಳಿ ಹಾಕುವಳು. ಕೊರಗನಿಗೆ ಸ್ಮೃತಿಬಂದು ಅವನು ಮೂರು ನಾಲ್ಕು ಲೋಟ ನೀರು ಕುಡಿದು ಏಳಲೆತ್ನಿಸುವನು. ಸುಧೆಯು ಏಳಬಿಡದೆ)

**ಸುಧಾ**—ಅಪ್ಪಾ, ನೀವು ಸಮಾಧಾನಚಿತ್ತರಾಗಿ ಮಲಗಿರಿ.

**ಕೊರಗ**—ಸಿದ್ಧಪ್ಪನಿಗೆ ನನ್ನ ಕತ್ತಿಯ ಪೆಟ್ಟಾಗಿ ಹೊರಗೆ ಅಂಗಳದಲ್ಲಿ ಬಿದ್ದಿರುವನು. ಹೊರಹೋಗಿ ಅವನಿಗೆಲ್ಲಿ ಪೆಟ್ಟಾಗಿದೆಯೆಂದು ನೋಡು.

**(ಸುಧೆಯು ಚಿಮಿಣಿ ಹಿಡಕೊಂಡು ಹೊರಹೋಗಿ ಸಿದ್ದಪ್ಪನ ಕುತ್ತಿಗೆ ಕೊಯ್ಯಲ್ಪಟ್ಟು ತುಂಬಾ ರಕ್ತ ಹರಿದಿರುವುದನ್ನು ಕಂಡು ಚಕಿತಳಾಗಿ ಒಂದೇಸವನೆ ಒಳಗೋಡಿ ಬಂದು ಬಾಗಿಲು ಹಾಕುವಳು)**

**ಕೊರಗ**—ಏನಾಯಿತು! ಮಗು! ಆ ದುರಾಚಾರಿಯು ಸತ್ತು ಹೋಗಿರುವನೇ?

**ಸುಧಾ**—ಹೌದು, ಹೌದು! ಅವನ ಕುತ್ತಿಗೆಯೇ ಕತ್ತರಿಸಲ್ಪಟ್ಟಿರುವುದು! ಅಂಗಳವೆಲ್ಲಾ ರಕ್ತಮಯವಾಗಿರುವುದು. ನಮ್ಮ ಗತಿಯಿನ್ನೇನು?

**ಕೊರಗ**—ಸುಮ್ಮಗಿರು! ಏನು ನಮ್ಮ ಗತಿ? ನಾವೇನನ್ಯಾಯ ಮಾಡಿರುವೆವು? ಅವನ ದುಷ್ಕೃತ್ಯದಿಂದ ಅವನೇ ಹೋದ, ನಾವೇನು ಮಾಡುವುದದಕ್ಕೆ? ಅವನೊಮ್ಮೆಯೇ ಕತ್ತಿಪೆಟ್ಟಿನಿಂದ ಬಿದ್ದುಬಿಟ್ಟುದರಿಂದ ಅವನ ಇಬ್ಬರು ಪೋಕ್ರಿ ಸಂಗಾತಿಗಳು ಭೀತಿಗೊಂಡು ಓಡಿಹೋದರು. ಇಲ್ಲವಾದರೆ ಮೂವರೂ ಒಟ್ಟಿಗೆ ನನ್ನ ಮೇಲೆ ಬಿದ್ದು ಏನು ಮಾಡುತ್ತಿದ್ದರೋ!

**ಸುಧಾ**—ಸಿದ್ಧಪ್ಪನೆಂದರೆ ಗಡಗುಟ್ಟಿ ನಡುಗುತ್ತಾರೆ ಇಲ್ಲಿಯವರೆಲ್ಲ. ರುದ್ರಮ್ಮ ನಿನ್ನೆ ಹೇಳುತ್ತಿದ್ದರು, ಅವನು ಮಹಾಪುಂಡುಗಾರನಂತೆ. ತಂದೆ ಮೊದಲೇ ಅವನಿಗೆ ಪಾಲುಕೊಟ್ಟು ಹೊರಹಾಕಿರುವರಂತೆ. ನಾವೀಗ ಆ ಹೆಣವನ್ನಿಲ್ಲಿಯೇ ಬಿಡುವುದೇ? ಅಬ್ಬಬ್ಬ ರಕ್ತವೇ! ನನ್ನ ಮೈ ಈಗಲೂ ಜುಮ್ಮೆನ್ನುವುದು!

**ಕೊರಗ**—ಬೆಳಿಗ್ಗೆ ಪೋಲೀಸರು ಬಂದು ಹೆಣವನ್ನು ಪರೀಕ್ಷಿಸಿಕೊಂಡು ಹೋದಾರು. ಮತ್ತೆ ನಾವೇನು ಮಾಡುವುದೀಗ?

**ಸುಧಾ**—ಪೋಲೀಸಿನವರು ನಮ್ಮನ್ನು ಜೈಲಿಗೊಯ್ದಾರೆ! ನಮಗಾರಿದ್ದಾರೆ ಇಲ್ಲಿ ಸಹಾಯ ಮಾಡುವವರು?

**ಕೊರಗ**—ನಮ್ಮನ್ನೇಕೆ ಜೈಲಿಗೊಯ್ಯುವುದು? ನಾವು ಮಾಡಿದ ತಪ್ಪೇನು? ಪುಂಡರೊಂದಿಗೆ ಅಮ್ಮನ ಮಾನಾಪಹಾರ ಮಾಡಬಂದಾಗ ಆತ್ಮರಕ್ಷಣೆಗಾಗಿ ಕತ್ತಿ ಬೀಸಿದಾಗ ಕತ್ತಿಯ ಪೆಟ್ಟು ಅಕಸ್ಮಾತ್ತಾಗಿ ಸಿದ್ಧಪ್ಪನ ಕುತ್ತಿಗೆಗೆ ಬಿತ್ತೆಂದು ಸತ್ಯ ಸಂಗತಿಯನ್ನೇ ಪೋಲೀಸರಿಗೆ ತಿಳಿಸಿದರೆ ಸರಿ

**ಸುಧಾ**—ಅಪ್ಪಾ ಅದು ಹೌದು. ನಾವೇ ಮೊದಲಾಗಿ ಪೋಲೀಸರಿಗೆ ತಿಳಿಸಬೇಕು ಈಗಲೇ ನೀವು ಹೋಗಿ ತಿಳಿಸಿಬಂದರೇನು? ಒಹೊ! ನಾನೇ ನನ್ನುವುದು? ಆ ಸಿದ್ಧಪ್ಪನ ಕಡೆಯವರೆಲ್ಲಿಯಾದರೂ ತಂಗಿಕೊಂಡಿದ್ದರೆ!

**ಕೊರಗ**—ಪ್ರಾಣವಿದ್ದರೆ ಬದುಕಿಕೊಂಡೇವೆಂದು ಅವರೆಲ್ಲಿ ಓಡಿಹೋಗಿರುವರೋ ಏನೋ! ನೀನು ಹೇಳಿದಂತೆ ನಾನೀಗಲೇ ಹೋಗಿ ಪೋಲೀಸ್ ಸ್ಟೇಶನಿಗೆ ತಿಳಿಸಿಬರುವೆನು. ನೋಡುವ ಎಲ್ಲುಂಟಾ ಗಾಡಿ ಲಾಟನು? (**ಲಾಟನನ್ನು ತಂದು ಹಚ್ಚಿ**) ನಾನೀಗ ಬರುವೆನು. ಪೋಲೀಸ್ ಸ್ಟೇಶನು ಹತ್ತಿರವೇ ಇದೆ. ನಾನು ಕಡಿದ ಕತ್ತಿ ಎಲ್ಲುಂಟು? ಇಲ್ಲಿಯೋ ಎಲ್ಲಿಯೋ ಬಿಸಾಡಿದೆ ನಾನು.

**ಸುಧಾ**—(**ಹುಡುಕಿ**) ಇಲ್ಲುಂಟು. ರಕ್ತದಿಂದ ತೊಯ್ದು ಹೋಗಿದೆ. ಅಬ್ಬಬ್ಬ, ನೀವು ಕೋಪಬಂದರೆ ಕಟುಕರೇ ಸರಿ!

**ಕೊರಗ**—ನಾನು ಕಟುಕನಾಗದಿರುತ್ತಿದ್ದರೆ, ಆ ನೀಚರೆಂತಹ ಅತ್ಯಾಚಾರ ಮಾಡುತ್ತಿದ್ದರೋ? ಅದಂತಿರಲಿ, ನೀವು ಬಾಗಿಲು ಹಾಕಿ ಮಲಗಿ. ನಾನು ಬೇಗ ಬರುವೆನು.

**ಸುಧಾ**—ಬಹಳ ಕೆಟ್ಟವರಪ್ಪಾ ಈ ಊರವರು! ಹೋಗಿ, ಬೇಗಹೋಗಿ ಹಾಗಾದರೆ. (**ಕೊರಗನು ಲಾಟಾನು ಹಿಡಕೊಂಡು ಹೋಗುವನು. ಸುಧೆಯು ದೀಪದ ಬೆಳಕಿಗೆ ಸ್ವಲ್ಪ ಹೊರ ಇಣಿಕಿ ಹೆಣವು ತೋರಿಬಂದೊಡನೆಯೇ ಡಬ್ಬನೆ ಬಾಗಿಲು ಹಾಕಿ**) ಏನು ಧೈರ್ಯವಪ್ಪಾ ಇವರದು! ನನಗಾದರೆ ಹೆಜ್ಜೆಯಿಡಲು ಸಾಧ್ಯವಿಲ್ಲ. ಏನೆಲ್ಲಾ ಆಗುವುದೋ ಇವರಿಂದ? ಪೋಲೀಸರೇನು ಮಾಡುವರೋ? ಹಣಕೊಟ್ಟರೆ ಏನೇನು ಮಾಡಿಬಿಡುತ್ತಾರಂತೆ ಅವರು! ಅಯ್ಯೋ! ನನ್ನ ದುರ್ವಿಧಿಗೊಂದು ಕೊನೆಯೆಂದಿಲ್ಲವೇ? ನನ್ನಂತಹ ಪಾಪಿನಿಯು ಲೋಕದಲ್ಲಾರೂ ಇರಲಾರರು. ನಿರ್ದುಷ್ಟರಾದ ಇವರು ಈ ಪಾತಕಿಯನ್ನೇಕೆ ಹಿಂಬಾಲಿಸಿದರೋ? ಅಹ, ನನ್ನಿಂದಾಗಿ....(**ಉಕ್ಕೇರಿ ಬರುವ ಆವೇಗವನ್ನು ಸಹಿಸಲಾರದೆ**) ಅಯ್ಯೋ! (**ಬಾಯ್ಬಿಟ್ಟು ಮರುಗುವಳು. ಆಗ ಮಗುವು ಪುನಃ ಎಚ್ಚರವಾಗಿ ಗಟ್ಟಿಯಾಗಿ ಕೂಗುವದು**)

---

# ೧೭ನೇ ದೃಶ್ಯ—ಬೀದಿ

[ದಫೇದಾರ ಅಬ್ದುಲ್ ಖಾದರ್ ಸಾಹೇಬನು, ಪಿಂಜರಿಯಲ್ಲಿ ಸುಧೆಯನ್ನು ಕಂಡೊಡನೆಯೇ ಬೋಧತಪ್ಪಿ ಬಿದ್ದ ಪ್ರಭಾಕರ ರಾಯನನ್ನು ಆಸ್ಪತ್ರೆಗೊಯ್ದು ಹಿಂದಿರುಗುವಾಗ ರಸ್ತೆಯಲ್ಲಿ ಬಸಪ್ಪನು ಅವನನ್ನು ಸಂಧಿಸಿ ಇಬ್ಬರೂ ಪ್ರಭಾಕರ ರಾಯನ ಕುರಿತು ಮಾತಾಡಿಕೊಳ್ಳುವರು]

**ಬಸಪ್ಪ**—ದಫೇದಾರ್ರೇ, ಹ್ಯಾಗಿದ್ದಾರೆ ಜಡ್ಜರು!

**ದಫೆದಾರ**—ಇನ್ನೂ ಸೌಖ್ಯವಾಗಿಲ್ಲ ಪಾಪ. ನಾನು ಹಲವು ಮಂದಿ ಜಡ್ಜರನ್ನು ಕಂಡಿದ್ದೇನೆ. ಅನೇಕರ ಕೈಕೆಳಗೆ ಕೆಲಸಮಾಡಿದ್ದೇನೆ. ಆದ್ರೆ ಇವರಷ್ಟು ಸಾತ್ವಿಕ ಸ್ವಭಾವದವರನ್ನು, ದಯಾಭರಿತರನ್ನು ಎಂದೂ ಕಾಣಲಿಲ್ಲ.

**ಬಸಪ್ಪ**—ಅದಂತಿರಲಿ, ಅವರಿಂದು ಕೋರ್ಟಿನಲ್ಲಿ ಬೋಧತಪ್ಪಿ ಬೀಳಲು ಕಾರಣವೇನು? "ಸುಧಾ! ಸುಧಾ! ಸುಧಾ!" ಎಂದು ಮೂರುಸಲ ಕರೆದು ಸ್ಮೃತಿ ತಪ್ಪಿ ಬಿದ್ದುದಂತೆ ನಿಜವೇ?

**ದಫೆದಾರ**—ಅದೇನೂ ನನಗೆ ಗೊತ್ತಿಲ್ಲ. ಏನೋ ತಲೆತಿರುಗಿ ಬೋಧ ತಪ್ಪಿರಬೇಕು. ಅವರಿಗೆ ಈಗ ಕೆಲ ಸಮಯದಿಂದ ಆರೋಗ್ಯ ಚೆನ್ನಾಗಿರಲಿಲ್ಲ. ಯಾವಾಗಲೂ ಮೌನವಾಗಿದ್ದು ಚಿಂತಾಭರಿತರಾಗಿದ್ದರು.

**ಬಸಪ್ಪ**—ಜಡ್ಜರೂ ಮಂಗಳೂರವರಂತೆ, ಸುಧೆಯೂ ಮಂಗಳೂರವಳಂತೆ. ಅವರಿಬ್ಬರೊಳಗೆ ಏನೋ ಸಂಗತಿ ನಡೆದಿರಬೇಕು ಎಂದು ಊರಲ್ಲೆಲ್ಲಾ ನಾನಾ ರೀತಿಯ ಸುದ್ದಿ ಹಬ್ಬಿದೆ. ನಮ್ಮ ನಂಬ್ರ ಒಂದು ಹೋದ ಹಾಗೆಯೇ ಏನು?

**ದಫೆದಾರ**—ನನಗಾವುದೂ ಗೊತ್ತಿಲ್ಲ. ದೇವರ ದಯದಿಂದ ಜಡ್ಜರಿಗೊಮ್ಮೆ ಸೌಖ್ಯವಾದರೆ ಸಾಕು.

**ಬಸಪ್ಪ**—ಅವರು ಆಸ್ಪತ್ರೆಯಲ್ಲಿಯೂ "ಸುಧಾ! ಸುಧಾ! ಕ್ಷಮಿಸು! ಕ್ಷಮಿಸು! ನಾನು ಮಾಡಿದ ಅಪರಾಧ ಕ್ಷಮಿಸು!" ಎಂದೆಲ್ಲಾ ಏನೇನೋ ಹಂಬಲಿಸುತಿದ್ದಾರಂತಲ್ಲ! ಸುಧೆಗೂ ಅವರಿಗೂ ಪ್ರೇಮವಿದ್ದಿರಬೇಕೆಂದೂ ಅದೇನೋ ಕಾರಣದಿಂದ ಆ ಪ್ರೇಮಕ್ಕೆ ವಿಘ್ನಬಂದು ಇಬ್ಬರಲ್ಲಿಯೂ ನಿರಾಶೆಯಾಗಿರಬೇಕೆಂದೂ ಕೆಲವರು ಹೇಳುತ್ತಿದ್ದಾರೆ ನಿಜವೇ?

**ದಫೆದಾರ**—ನಿಜವೆ? ನಿಜವೆ? ಎಂದು ನೀವು ನನ್ನೊಡನೇನು ಕೇಳುವುದು? ನಾನು ಮೊದಲೇ ಹೇಳಿದೆನಲ್ಲ, ನನಗೇನೂ ಗೊತ್ತಿಲ್ಲವೆಂದು. ನಿಮಗೇನೂ

ಬೇರೆ ಕೆಲಸವಿಲ್ಲವೇ? ಸುಧೆಯೆಲ್ಲಿ! ಜಡ್ಜರೆಲ್ಲಿ! ಏನಾದರೂ ಹೇಳುವುದಕ್ಕೊಂದು ಅರ್ಥವಿರಬೇಕಲ್ಲ.

**ಬಸಪ್ಪ**—ಅರ್ಥವುಂಟೋ ಇಲ್ಲವೋ ಎಂದು ಇನ್ನು ಕೆಲವು ದಿನಗಳಲ್ಲಿ ತಿಳಿಯುವುದು. ಹ್ಯಾಗೂ ನಮ್ಮ ಕೇಸೊಂದು ಹೋದ ಹಾಗೆಂತ ತೋರುತ್ತದೆ.

**ದಪೆದಾರ**—ಹೋದರೇನು? ಸಿದ್ಧಪ್ಪ ಸತ್ತುದರಿಂದ ಇಡೀ ಊರಿಗೇನೇ ಒಳ್ಳೇದಾಯ್ತು. ಇಲ್ಲದಿದ್ದರೆ ಇನ್ನೆಷ್ಟು ಮಂದಿ ಸ್ತ್ರೀಯರ ಮಾನಹಾನಿ ಯಾಗುತಿತ್ತೋ! ನಾನು ಹೇಳುವುದಾದರೆ ನಿಜವಾದ ಶೂರನೆಂದರೆ ಕೊರಗ! ಅವ ಮಾಡಿದ ತಪ್ಪೇನು? ನೀವೆಲ್ಲಾ ಪೋಲೀಸರಿಗೆ ಲಂಚಕೊಟ್ಟು ಅವರ ಮೇಲೆ ಕೊಲೆಯ ಚಾರ್ಜು ಮಾಡಿಸಿರುವಿರೆಂದೋ? ನೀವು ಏನೂ ಮಾಡುವಿರಿ!

**ಬಸಪ್ಪ**—ನಾವು ಏನೂ ಮಾಡುತ್ತೇವೆನ್ನುವ, ಶಾಂತಪ್ಪನವರು ಸುಳ್ಳು ಖಟ್ಲೆಗೆ ಪ್ರೋತ್ಸಾಹ ಕೊಟ್ಟಾರೇ?

**ದಪೆದಾರ**—ಶಾಂತಪ್ಪನವರಿಗೇನು ಗೊತ್ತು- ಯಾವುದು ಸುಳ್ಳು ಯಾವುದು ಸತ್ಯವೆಂದು? ದೇವತಾ ಮನುಷ್ಯ ಅವರು. ನೀವು ಹೇಳಿದುದನ್ನು ನಂಬಿದ ರಷ್ಟೆ. ನಡೆದುದೊಂದು, ನೀವು ಅವರೊಡನೆ ಹೇಳಿದುದೊಂದು. ನಮಗೆಲ್ಲಾ ಗೊತ್ತುಂಟು ನಿಮ್ಮ ಗುಟ್ಟು.

**ಬಸಪ್ಪ**—ಏನಾಯಿತು ಗುಟ್ಟು ಗೊತ್ತಿದ್ದರೆ? ಕೋರ್ಟುಗಳಲ್ಲಿ ನಡೆಯುವುದೇ ಹೆಚ್ಚಾಗಿ ಸುಳ್ಳಲ್ಲವೇ?

**ದಪೆದಾರ**—ಸಾಕು, ನಿಮ್ಮ ಮಾತೆಲ್ಲ. ನಾನು ಹೋಗುತ್ತೇನೆ. (ಹೋಗುವನು.)

**ಬಸಪ್ಪ**—(ಯೋಚಿಸಿ ಈಗ ಈ ಪ್ರಭಾಕರರಾಯ ಮತ್ತು ಸುಧೆಯರ ರಹಸ್ಯವನ್ನು ಕಂಡು ಹಿಡಿಯುವ ಬಗೆ ಹ್ಯಾಗಪ್ಪ! ಅವರ ಹೆಂಡ್ತಿಯನ್ನೇ ಹಿಡಿಯಬೇಕು. ರಾಯರಿಗೂ ಅವರಿಗೂ ಯಾವಾಗಲೂ ಸರಿಹೋಗುವುದೇ ಇಲ್ಲವಂತೆ. ಅವರು ಎಲ್ಲಾ ಗುಟ್ಟು ಹೇಳ್ಯಾರು. ಛ! ತಪ್ಪಾಗಿಹೋಯ್ತು! ದಪೆದಾರನೊಡನೆ ನಾನು ಸ್ವಲ್ಪ ಜೋರಿನಿಂದ ಮಾತಾಡಿಬಿಟ್ಟೆ. ಅವನಿಗೇನೇ ಏನಾದರೂ ತಾಗಿಸಿ ಜಡ್ಜರ ಹೆಂಡ್ತಿಯಿಂದ ಅವರ ಗುಟ್ಟನ್ನೆಲ್ಲಾ ಪಡೆಯುವ ಪ್ರಯತ್ನ ಮಾಡಬೇಕು. (ದಪೇದಾರನನ್ನು ಹುಡುಕಿಕೊಂಡು ಹೋಗುವನು.)

---

ವ್ಯಭಿಚಾರಿಣಿ ಯಾರು



ಪ್ರಭಾಕರ—ಪ್ರಿಯೆ, ನನ್ನ ಅಪರಾಧವೇನೋ ಅಕ್ಷಮ್ಯವಿರುವುದು. ನಿನ್ನನ್ನು ಸಜೀವನಾಗಿ ಕೊಂದ ಕೊಲೆಪಾತಕಿ ನಾನು.

(ಪುಟ 63)

# ೧೮ನೇ ದೃಶ್ಯ—ಜೈಲು

[ನಡುರಾತ್ರಿ ಸಮಯ. ಜಡ್ಜ ಪ್ರಭಾಕರರಾಯರು ಜೈಲಿನ ಕಾವಲುಗಾರನೊಬ್ಬನಿಂದ ಸುಧೆಯಿರುವ ಕೋಣೆಯ ಬಾಗಿಲು ತೆರೆಯಿಸಿ ಅವನ ಹಸ್ತವಿದ್ದ ಕೈಲಾಟನನ್ನು ತೆಗೆದುಕೊಂಡು, ಅವನನ್ನು ದೂರಹೋಗ ಹೇಳಿ ತಾನೊಬ್ಬನೇ ಕೋಣೆಗೆ ಪ್ರವೇಶಿಸುವನು]

**ಸುಧಾ**—(ಮಲಗಿದ್ದವಳು ಫಕ್ಕನೆ ಎಚ್ಚತ್ತು) ಅದಾರು! (ಜಗ್ಗನೆ ಎದ್ದು ನಿಲ್ಲುವಳು)

**ಪ್ರಭಾಕರ**—(ಲಾಟೀನನ್ನು ಮೆಲ್ಲಗೆ ಕೆಳಗಿರಿಸಿ) ನಾನು, (ಮುಂದೆ ಮಾತಾಡಲಾರದೆ ಸುಮ್ಮನಾಗುವನು.)

**ಸುಧಾ**—(ಪ್ರಭಾಕರನನ್ನೊಮ್ಮೆ ದಿಟ್ಟಿಸಿನೋಡಿ ಆಮೇಲೆ ಫಕ್ಕನೆ ಮುಖತಿರುಗಿಸಿ) ಈ ನಡುರಾತ್ರಿಯಲ್ಲಿ ನಿಮಗೆ ಇಲ್ಲೇನು ಕೆಲಸ? ನಡೆಯಿರಿ ಹೊರಗೆ.

**ಪ್ರಭಾಕರ**—ಸುಧಾ! ಸುಧಾ!! ಸುಧಾ!!! (ಕಾಲಿಗೆರಗುವನು. ಸುಧೆಯು ತುಸುದೂರ ಸರಿದು ಮೊದಲಿನಂತೆ ಮುಖತಿರುಗಿಸಿ ನಿಂತುಬಿಡುವಳು ಪ್ರಭಾಕರನು ಕಣ್ಣೀರು ಸುರಿಸುತ್ತಾ ಎದ್ದುನಿಂತು) ಸುಧಾ ಕ್ಷಮಿಸು! ಕ್ಷಮಿಸು!! (ಪುನಃ ಮೊಣಕಾಲೂರಿ ಬೇಡುವನು)

**ಸುಧಾ**—ಸರಿಯಿರತ್ತ! ನಿಮ್ಮೊಡನೆ ಮಾತಾಡುವ ಅವಶ್ಯ ನನಗಿಲ್ಲ.

**ಪ್ರಭಾಕರ**—ಸುಧಾ, ನನ್ನ ಅಪರಾಧವೇನೋ ಅಕ್ಷಮ್ಯವಿರುವುದು. ನಿನ್ನನ್ನು ಸಜೀವವಾಗಿ ಕೊಂದ ಕೊಲೆಪಾತಕಿ ನಾನು.

**ಸುಧಾ**—ನೀವು ಕೊಲೆಪಾತಕಿಯೇ? ಅಹಹ! ನೀವು ಡಿಸ್ಟ್ರಿಕ್ಟ ಜಡ್ಜರು! ಸಮಾಜದ ಸನ್ಮಾನ್ಯ ಸದ್ಗೃಹಸ್ಥರು! ವ್ಯಭಿಚಾರಿಣಿಯಾಗಿ ಸಮಾಜ ಬಹಿಷ್ಕೃತಳಾದವಳು ನಾನು! ಕೊಲೆಪಾತಕಿಯಾಗಿ ಕಾರಾಗೃಹದಲ್ಲಿ ನರಳುತ್ತಿರುವ ಮಹಾಪಾತಕಿಯು! ನನ್ನ ಗೊಡವೆ ನಿಮಗೇಕೆ?

**ಪ್ರಭಾಕರ**—ಸುಧಾ, ಮಹಾಪಾವನೆ ನೀನು. ವಿಶ್ವಘಾತಕಿ ನಾನು. ಆ ಖೂಳ ಅಮೃತರಾಯನು ಹಣದಾಸೆಯಿಂದ ಮಾಡಿದ ಪಾಪಕೃತ್ಯವನ್ನೆಲ್ಲಾ ತಿಳಿಸಿ, ನೀನು ನಿರ್ದೋಷಿಯೆಂದು ಸಿದ್ಧಪಡಿಸಿ, ತನ್ನ ದುಷ್ಕೃತ್ಯಕ್ಕಾಗಿ ತೀವ್ರ ಪಶ್ಚಾತ್ತಾಪಪಟ್ಟು ನನಗೆ ಕಾಗದ ಬರೆದಿರುವನು. ಸುಧಾ! ಸುಧಾ!! ನಿನ್ನ ಹೊರತು ನನಗಿನ್ನು ಅನ್ಯಥಾ ಗತಿಯೆಂದರೆ ಆತ್ಮಹತ್ಯೆ! ನಿನ್ನ ಕ್ಷಮೆಯೊಂದರ ಮೇಲೆ ನನ್ನ ಜೀವನದ ಆಶಾತಂತುವಿನ ಅವಲಂಬನೆಯಿದೆ. ಅದು ಕಡಿದು ಹೋಯಿತೆಂದರೆ ಮತ್ತದು ಉಳಿವಂತಿಲ್ಲ. ಸುಧಾ, ಕ್ಷಮಿಸುವೆಯೋ ಹೇಳು.

**ಸುಧಾ**—ಇನ್ನು ನನ್ನ ಕ್ಷಮೆಯಿಂದೇನು? ನಿಮ್ಮ ಪರಿಹಾಸ್ಯ ಬಿಟ್ಟು ನನ್ನನ್ನು ನನ್ನ ಪಾಡಿಗೆ ಬಿಟ್ಟು ಕೂಡಲೆ ಇಲ್ಲಿಂದ ಹೋಗಿರಿ.

**ಪ್ರಭಾಕರ**—ಸುಧಾ, ಏನು ಪರಿಹಾಸ್ಯವೇ? ಇನ್ನೂ ನನ್ನ ಮಾತಿನಲ್ಲಿ ನಿನಗೆ ನಂಬಿಗೆ ಬಾರದೆ? ಘೋರ ಬೆಂಕಿಯೇ ಎದ್ದು ಧಗಧಗನೆ ಉರಿಯುತ್ತಿರುವಾಗ ಅದನ್ನೊಡನೆಯೇ ತಣ್ಣೀರೆರೆದು ತಣಿಸದೆ ಮತ್ತೂ ಮತ್ತೂ ಉರಿಮಸಗಿಸುವೆಯಾ ಸುಧಾ?

**ಸುಧಾ**—ನಾನು ತಣ್ಣೀರೆರೆದು ತಣಿಸುವುದೇ? ಸಿಡಿಮದ್ದು ಹಾಕಲ್ಪಟ್ಟು ತಣ್ಣೀರ ಬುಗ್ಗೆಯೇ ಸಿಡಿದು ಸೀಕರಿಯಾಗಿರುವಾಗ ತಣ್ಣೀರ ಬಿಂದುವಾದರೂ ಹೊರಡುವುದೆಲ್ಲಿಂದ?

**ಪ್ರಭಾಕರ**—ಹೌದು, ಸುಧಾ, ಹೌದು. ನಿನ್ನ ಜೀವನವನ್ನೇ ಹಾಳುಗೆಡಹಿದ ಘೋರ ಪಾಪಿ ನಾನು. ಹಿಂದು ಮುಂದು ಯೋಚಿಸದೆ ತಂದೆಯ ಮಾತನ್ನು ನಂಬಿ ನಿನ್ನ ಜೀವನ ಸುಖವನ್ನು ಮಣ್ಣುಗೂಡಿಸಿದ ಘಾತುಕ ನಾನು! ಸುಧಾ ಎಲ್ಲಿ, ಆ ಮಗುವೆಲ್ಲಿ?

**ಸುಧಾ**—(ಒಡನೆಯೇ ಮತ್ತಷ್ಟು ಸಿಟ್ಟೇರಿ) ಯಾವ ಮಗು? ಯಾರಿಗೋ ಹುಟ್ಟಿದ ಮಗುವಿನಿಂದೇನು ನಿಮಗೆ?

**ಪ್ರಭಾಕರ**—ಛೆ! ಛೆ!! ಸುಧಾ ಹಾಗೇಕೆನ್ನುವೆ? ಅದು ನನ್ನ ಮಗು! ಎಲ್ಲಿದೆ ಸುಧಾ, ಮಗುವೆಲ್ಲಿದೆ? ಆ ಮಗುವನ್ನಾದರೂ ಒಂದೊಮ್ಮೆ ಕಂಡು ಆನಂದಿಸಗೊಡಲಾರೆಯಾ? ಒಮ್ಮೆ ಮಾತ್ರ ಕಣ್ಣಾರೆ ಕಂಡರೆ ಸಾಕು ಸುಧಾ!

**ಸುಧಾ**—ವ್ಯಭಿಚಾರಿಣಿಯ ಮಗುವನ್ನು ಸದಾಚಾರಿಯಾದ ನೀವೆಂದಿಗೂ ನೋಡಬಾರದು.

**ಪ್ರಭಾಕರ**—ಸುಧಾ, ಇನ್ನೂ ನನ್ನ ಕುರಿತು ನಿನ್ನ ಹೃದಯದಲ್ಲಿ ಒಂದಿಷ್ಟು ಕನಿಕರ ಹುಟ್ಟಲಾರದೇ? ಶವವನ್ನು ತಿವಿದಂತೆ, ಸುಡುತ್ತಿರುವ ಈ ಹೃದಯವನ್ನು ಬಿರುನುಡಿಗಳಿಂದೇಕೆ ಚುಚ್ಚುವೆ ಸುಧಾ?

**ಸುಧಾ**—ನನಗೆಲ್ಲಿಯ ಹೃದಯ? ಎಂತಹ ಕನಿಕರ? ಅಸ್ಥಿಪಂಜರಕ್ಕೆ ಹೃದಯಭಾವವಿರುವುದೇ?

**ಪ್ರಭಾಕರ**—(ಆವೇಗಭರದಿಂದ ಪುನಃ ಸುಧೆಯ ಕಾಲಿಗೆಬಿದ್ದು) ಸುಧಾ! ಸುಧಾ! ಈ ನರಪಿಶಾಚಿಯನ್ನು ನೀನೆಂದಿಗೂ ಕ್ಷಮಿಸಲಾರೆಯಾ? ಹೇಳು, ಬೇಗಹೇಳು.

(ಕಾಲುಹಿಡಿದು ಕುಲುಕಿ) ಇದೀಗ ನನ್ನ ಕೊನೆಯ ಪ್ರಾರ್ಥನೆ. ಕ್ಷಮಿಸದಿದ್ದರೆ ಇದೇ ನಮ್ಮ ಕೊನೆಯ ಮಿಲನ. ಕ್ಷಮಿಸು, ಒಮ್ಮೆ ದಯಮಾಡಿ ಕ್ಷಮಿಸು ಸುಧಾ!

**ಸುಧಾ** —ಕ್ಷಮಿಸುವುದೆ? (ಉನ್ಮತ್ತಳಂತೆ) ಹ-ಹ-ಹ! ಹ-ಹ-ಹ-ಹ!! ಹ-ಹ-ಹ-ಹ-ಹ-ಹ!!! ನಾನು ಕ್ಷಮಿಸುವುದೇ? ಯಾರನ್ನು? ಹ-ಹ-ಹ-ಹ-ಹ-ಹ! ನಾನು ವ್ಯಭಿಚಾರಿಣಿ! ವ್ಯಭಿಚಾರಿಣಿ!! ಹ-ಹ-ಹ-ಹ! ಕ್ಷಮಿಸುವುದೇ? ಮಗು! ಮಗು!! ಎಲ್ಲಿ ಮಗುವೆಲ್ಲಿ? ನನ್ನ ಮಗುವೆಲ್ಲಿ? ಅಪ್ಪಾ! ಅಪ್ಪಾ!! ಅಲ್ಲ! ಅಲ್ಲ!! ಅಪ್ಪನಲ್ಲ ಕೊಂದುದು ನಾನು! ನಾನು ಕೊಂದುದು! ನನ್ನನ್ನು ಗಲ್ಲಿಗೇರಿಸಿರಿ! ಅಪ್ಪನನ್ನು ಬಿಡಿರಿ! ಅಪ್ಪನನ್ನು ಬಿಡಿರಿ! ಹ-ಹ-ಹ! ಹ-ಹ-ಹ-ಹ-ಹ-ಹ-ಹ!!

**ಪ್ರಭಾಕರ**—(ಎದ್ದು ಸುಧೆಯ ಭುಜಗಳೆರಡನ್ನೂ ಹಿಡಿದು ಕುಲುಕಿ) ಸುಧಾ! ಸುಧಾ!! ಇದೇನನ್ನುವೆ? ಏನಾಯಿತು ನಿನಗೆ? ಬೇಡ, ಬೇಡ, ಈ ಪಾಪಿಯನ್ನು ನೀನು ಕ್ಷಮಿಸುವುದು ಬೇಡ! ನಾನು ಹೋಗುವೆನು. ನೀನು ಸ್ವಸ್ಥಚಿತ್ತಳಾಗು.

**ಸುಧಾ**—(ಗಂಭೀರ ಮುಖಮುದ್ರೆಯಿಂದ ಪ್ರಭಾಕರನನ್ನು ದಿಟ್ಟಿಸಿ) ಕ್ಷಮಿಸುವೆನು,—ಕ್ಷಮಿಸುವೆನು. ಆದರೆ—ಆದರೆ—

**ಪ್ರಭಾಕರ**—ಏನು? ಆದರೆ ಏನು ಸುಧಾ?

**ಸುಧಾ**—ಆದರೆ ನನ್ನಪ್ಪನನ್ನು ಬಿಟ್ಟುಬಿಡಬೇಕು. ಅವರ ಬದಲಿಗೆ ನನ್ನನ್ನು ಗಲ್ಲಿಗೇರಿಸಬೇಕು. ಆಗ ಮಾತ್ರ ನಿಮ್ಮನ್ನು ಕ್ಷಮಿಸುವೆನು.

**ಪ್ರಭಾಕರ**—(ವಿಸ್ಮಯಗೊಂಡು) ಯಾರು? ನಿನ್ನಪ್ಪನಾರು, ಸುಧಾ?

**ಸುಧಾ**—ಮೊದಲು ನೀವು ಅವರನ್ನು ಬಿಡುವಿರಾ ಹೇಳಿ.

**ಪ್ರಭಾಕರ**—ಅವರೆಲ್ಲಿರುವರು?

**ಸುಧಾ**—ಈ ಜೈಲಲ್ಲೇ ಇರುವರು.

**ಪ್ರಭಾಕರ**—ಯಾರು ಕೊರಗನೇ?

**ಸುಧಾ**—ಹೌದು ಹೌದು. ಅವರೇ ನನ್ನ ತಂದೆ, ತಾಯಿ, ಬಂಧುಬಳಗ, ನನ್ನ ಜೀವದ ಜೀವ, ಪ್ರಾಣದ ಪ್ರಾಣ.

**ಪ್ರಭಾಕರ**—ಆಯ್ತು, ಖಂಡಿತವಾಗಿಯೂ ಬಿಡುವೆನು. ಅವರೊಂದಿಗೆ ನಿನ್ನನ್ನೂ ಬಿಡುವೆನು. ನನ್ನನ್ನೊಮ್ಮೆ ಕ್ಷಮಿಸು ಸುಧಾ! ನನ್ನ ಅಕ್ಷಮ್ಯ ಪಾಪದ ಪ್ರಾಯಶ್ಚಿತ್ತವಾಗಿ ನನ್ನ ಪ್ರಾಣವನ್ನೇ ನಿನ್ನ ಪದತಲದಲ್ಲರ್ಪಿಸು

ವೆನು. ಇನ್ನು ಮುಂದೆ ಅದರ ಅಳಿವು ಉಳಿವುಗಳ ಸುಖದುಃಖದ ಭಾರವೆಲ್ಲ ನಿನ್ನದು.

**ಸುಧಾ**—ಅದಂತಿರಲಿ, ಅಪ್ಪನ ಬದಲಾಗಿ ನನ್ನನ್ನು ಗಲ್ಲಿಗೇರಿಸುವ ಮಾತು ಕೊಡಬೇಕು. ಸಿದ್ಧಪ್ಪನನ್ನು ನಾನು ಕೊಂದುದೆಂದಾಗಬೇಕು.

**ಪ್ರಭಾಕರ**—ಅದೆಷ್ಟುಕ್ಕೂ ನನ್ನಿಂದಾಗದು ಸುಧಾ! ನಾನಾಮಾತು ಕೊಡಲಾರೆನು. ನಿಮ್ಮಿಬ್ಬರನ್ನೂ ನಾನು ಬಿಡುವೆನು. ಅದರಿಂದ ನನ್ನ ಕೆಲಸವೇ ಹೋಗುವಂತಾದರೂ ನಾನು ಗಣ್ಯಮಾಡೆನು. ನಾನೀಗಲೇ ಹೋಗಿ ಕೊರಗನೊಡನೆ ಮಾತಾಡುವೆನು.

**ಸುಧಾ**—ಹೋಗಿರಿ, ಬೇಗನೆಹೋಗಿ ಮಾತಾಡಿರಿ. ಅಹ! ನನಗಾಗಿ ಅವರು ಪಟ್ಟ ಕಷ್ಟವೇ! ಈಗ ಅವರ ತಲೆಗೆಟ್ಟು ಹೋಗಿರುವಂತಿವೆ. (**ಕಣ್ಣೀರಿಡುವಳು.**)

**ಪ್ರಭಾಕರ**—ಈಗಲೇ ಹೋಗುವೆನು. (**ವಾಶ್ಯೂ ಸಂದೇಹಗೊಂಡು ನಿಂತುಕೊಳ್ಳುವನು**)

**ಸುಧಾ**—ಹೋಗಿರಿ, ಮತ್ತೇಕೆ ನಿಂತಿರುವಿರಿ?

**ಪ್ರಭಾಕರ**—ಸುಧಾ, ನೀನು ನನ್ನನ್ನು ಕ್ಷಮಿಸುವೆಯಲ್ಲವೇ?

**ಸುಧಾ**—ಹೌದು ಕ್ಷಮಿಸುವೆನು. ಬೇಗನೆ ಹೋಗಿರಿ ಇಲ್ಲಿಂದೊಮ್ಮೆ. (**ಮುಖತಿರುಗಿಸುವಳು**)

**ಪ್ರಭಾಕರ**—ಇಲ್ಲ ಸುಧಾ, ಇಲ್ಲ. ನೀನು ನನ್ನನ್ನು ಹೃತ್ಪೂರ್ವಕ ಕ್ಷಮಿಸಿರುವುದಿಲ್ಲ.

**ಸುಧಾ**—ಹೃತ್ಪೂರ್ವಕವಾಗಿ ಕ್ಷಮಿಸಿರುವೆನು. ಹೋಗಿರಿ, ಅಪ್ಪನ ಅವಸ್ಥೆಯೇನಾಗಿರುವುದೆಂದು ನೋಡಿರಿ.

**ಪ್ರಭಾಕರ**—ಈಗ ಹೋಗುವೆನು ಸುಧಾ. ಇನ್ನೊಮ್ಮೆ ಬರುವೆನು.

**ಸುಧಾ**—ಇನ್ನೊಮ್ಮೆ ಯಾಕೆ ಬರುವುದು? ನೀವು ಮಾತುಕೊಟ್ಟಂತೆ ನಡೆದರೆ ಸಾಕು. ನಾನು ನಿಮ್ಮನ್ನು ಸಂಪೂರ್ಣವಾಗಿ ಕ್ಷಮಿಸಿರುವೆನು. (**ಪ್ರಭಾಕರನು ತೃಪ್ತನಾಗದಿದ್ದರೂ ಕೊರಗನನ್ನು ನೋಡುವ ಆತುರದಿಂದ ಲಾಟನ್ ಹಿಡಕೊಂಡು ಸಾಧೆಯ ಕೋಣೆಯಿಂದ ಹೊರಬರುವನು. ಕಾವಲುಗಾರನು ಬಾಗಿಲು ಹಾಕಿ ಪ್ರಭಾಕರನನ್ನು ಕೊರಗನಿರುವ ಕಟ್ಟಡಕ್ಕೆ ಕರೆದೊಯ್ಯುವನು.**)

---

## ವ್ಯಭಿಚಾರಿಣಿ ಯಾರು



ರಮಾನಾಥನ್— ನೀನಿಲ್ಲದೆ ನನ್ನ ಜೀವನವೇ ನಿಸ್ಸಾರ ಲೀಲಾ! ನೀನೀಗ ಬಂದೊಡನೆಯೇ ನನ್ನ ನರನಾಡಿಗಳಲ್ಲೆಲ್ಲಾ ಒಮ್ಮೆಯೇ ಬಿಸಿರಕ್ತ ಪ್ರವಹಿಸಿ ನವ ಉತ್ಸಾಹವುಂಟಾಗಿರುವುದು.

ಲೀಲಾ— ನನಗೂ ಆ ಮೊದ್ದು ಜಂತುವಿನೊಂದಿಗೆ ಜೀವನವೇ ಅಸಹನೀಯವಾಗಿರುವುದು.

( ಪುಟ 67 )

# ೧೯ನೇ ದೃಶ್ಯ—ಉದ್ಯಾನವನ

[ಡಾಕ್ಟರ್ ರಮಾನಾಥನನು ಸಂಜೆ ಮದ್ರಾಸ್ ಸಮುದ್ರತೀರದ ಏಕಾಂತ ಪ್ರದೇಶವೊಂದರಲ್ಲಿ ತುಸು ಹೊತ್ತು ಶಿಳ್ಳು ಹಾಕುತ್ತಾ ಕುಳಿತು ಆ ಮೇಲೆ ಕಿಸೆಯಿಂದ ಲೀಲಾವತಿಯ ಪತ್ರವೊಂದನ್ನು ತೆಗೆದು ನೋಡಿ ಆನಂದಪರವಶನಾಗಿ ಹಾಡುವನು.]

**ಲೀಲಾ**—(ಪ್ರವೇಶಿಸಿ ತುಸು ಹೊತ್ತು ಡಾಕ್ಟರ್ ರಮಾನಾಥನನ ಹಿಂದೆಯೇ ನಿಂತು ಆ ಮೇಲೆ ಫಕ್ಕನೆ ಹೋಗಿ ಎರಡೂ ಕಣ್ಣುಗಳನ್ನು ಬಲವಾಗಿ ಹಿಡಿಯುವಳು.)

**ರಮಾನಾಥನ್**—ಯಾರದು? ಸ್ತ್ರೀಯರಿಷ್ಟು ಗಟ್ಟಿಯಾಗಿ ಹಿಡಿಯಲಾರರು. ಯಾರೋ ಗಂಡಸರು!

**ಲೀಲಾ**—(ಗಹಗಹಿಸಿ ನಕ್ಕು) ಹುಂ, ಗಂಡಸು, ಗಂಡಸಿನ ಹೆಸರೇನು!

**ರಮಾನಾಥನ್**—ಓಹೋ ನೀನೆ! ಬಿಡುಬಿಡು (ಕೈ ಬಿಡಿಸಿಕೊಂಡು) ನಿನ್ನೊಡನೆ ನಾನು ಮಾತನಾಡಲಾರ. ನೀನು ನನ್ನ ಬಳಿಗಿನ್ನು ಬರಬಾರದು.

**ಲೀಲಾ**—ಅದೇಕಷ್ಟು ಕೋಪ ಮಿಸ್ಟರ್ ರಮಾನಾಥನ್? ಆ ಪ್ರಾಣಿ ನನ್ನನ್ನು ಬರಲೇ ಬಿಡಲಿಲ್ಲ. ನಮ್ಮ ರಹಸ್ಯವನ್ನು ಇತರ ಕಿವಿಗಾರೋ ಹಾಕಿರುವಂತೆ ತೋರುತ್ತದೆ.

**ರಮಾನಾಥನ್**—ಲೀಲಾ, ಎಷ್ಟು ದಿನಗಳಿಂದ ನಾನಿಲ್ಲಿ ಕುಳಿತು ಕುಳಿತು ನೀನು ಬರುವೆಯೆಂದು ಹಾರೈಸಿಕೊಂಡಿರುವುದು? ಕಡೆಗೆ ಇಂದೂ ಬರುವೆಯೊ ಇಲ್ಲವೊ ಎಂದು ಬಹಳ ಸಂದೇಹಗೊಂಡಿದ್ದೆ. ನೀನಿಲ್ಲದೆ ನನ್ನ ಜೀವನವೇ ನಿಸ್ಸಾರ ಲೀಲಾ! ಇಷ್ಟೊಂದು ಮನೋಹರ ದೃಶ್ಯವೂ ನನ್ನಲ್ಲಿ ಒಂದಿಷ್ಟು ಉಲ್ಲಾಸವನ್ನುಂಟು ಮಾಡಿರಲಿಲ್ಲ. ಆದರೆ ನೀನೀಗ ಬಂದೊಡನೆಯೇ ನನ್ನ ನರನಾಡಿಗಳಲ್ಲೆಲ್ಲ ಒಮ್ಮೆಯೇ ಬಿಸಿರಕ್ತ ಪ್ರವಹಿಸಿ ನವ ಉತ್ಸಾಹವುಂಟಾಗಿರುವುದು.

**ಲೀಲಾ**—ನನಗೂ ಆ ಪೆದ್ದು ಜಂತುವಿನೊಂದಿಗೆ ಜೀವನವೇ ಅಸಹನೀಯವಾಗಿರುವುದು. ನಿಮ್ಮನ್ನಾವಾಗ ಕಾಣುವುದೆಂದು ದಿನಗಳನ್ನು ಎಣಿಕೆಹಾಕುತ್ತಾ ವರ್ಷಗಳಂತೆ ದೂಡುತ್ತಿರುವೆನು. ಒಂದೊಮ್ಮೆ ಮದ್ರಾಸಿಗೆ ಬರುವುದೆಂದರೆ ಹೊಸ ಪ್ರಾಣವೇ ಬಂದಂತಾಗುವುದು.

**ರಮಾನಾಥನ್**—ಬಳ್ಳಾರಿ ಬಲು ದೂರ ಲೀಲಾ. ನೀನೆಲ್ಲಿಗಾದರೂ ಮದ್ರಾಸಿನ ಹತ್ತಿರಕ್ಕೇನೇ ನಿನ್ನ ಗಂಡನಿಗೆ ವರ್ಗಮಾಡಿಸಿಕೊಂಡರೆ ಬಹಳ

ಒಳ್ಳೇದಾದೀತು. ನಾನೂ ಆಗಾಗ ಬರಬಹುದು. ನಿನಗೂ ಬರಲನುಕೂಲವಾಗುವುದು. ನಿನ್ನ ತಂದೆಯೊಡನೆ ಈ ಸಲ ಛಲಹಿಡಿದು ಕೇಳಬೇಕು ನೀನು.

**ಲೀಲಾ**—ಅವರು ಈಗೀಗ ನನ್ನ ಮಾತಿಗೆ ಕಿವಿಕೊಡುವುದೇ ಇಲ್ಲ. ಅವರ ಮನಸ್ಸನ್ನು ಯಾರೋ ಕೆಡಿಸಿರುವಂತಿದೆ. ನಾನೇನು ಹೇಳಿದರೂ 'ಹುಂ' ಎಂದಿಷ್ಟೇ ಹೇಳಿ ಸುಮ್ಮನಾಗುವರು.

**ರಮಾನಾಥನ್**—ಲೀಲಾ! ಅದೆಷ್ಟು ಮನೋಜ್ಞವಾಗಿರುವುದೀಸಂಧ್ಯಾರಾಗ!

**ಲೀಲಾ**—ಹೌದು! ಮಿಸ್ಟರ್ ರಮಾನಾಥನ್. ಅದೆಷ್ಟು ಉಲ್ಲಾಸಕರವಿರುವುದೀ ಸಂಜೆಯ ಸೊಬಗು. ಆ ಸುಟ್ಟ ಬಳ್ಳಾರಿಯಲ್ಲಿ ನೋಡಬೇಕೆಂದರೆ ಒಂದು ಚಂದದ ನೋಟವಿಲ್ಲ, ಎಲ್ಲವೂ ಒರಟು. ವಿಕಟ! ಭೀಭತ್ಸ! ಅಲ್ಲಿರುವುದೆಂದರೆ ನನಗೊಂದು ಕಠಿಣಶಿಕ್ಷೆ! ಆದರೆ ಮಾಡುವುದೇನು! ಮಿಸ್ಟರ್ ರಮಾನಾಥನ್! ನಮಗೆ ಸ್ತ್ರೀಯರಿಗೆ ಸ್ವಾತಂತ್ರ್ಯವೇನಿದೆ? ಗಂಡನೆಂತಹ ಭಂಡನಾದರೂ ಅವನೊಂದಿಗೇನೇ ನರಳಿಕೊಂಡಿರಬೇಕಲ್ಲವೇ?

**ರಮಾನಾಥನ್**—ನಮ್ಮಿಬ್ಬರ ಸಮ್ಮಿಲನವಾಗುವುದ ಅಪರೂಪ! ಅಪರೂಪವಾಗಿ ದೊರೆಯುವ ಈ ಅಲ್ಪ ಸಮಯವನ್ನಾದರೂ ನಾವು ದುಃಖದಲ್ಲಿ ಕಳೆಯಬೇಕೆ? ಬಾ ಲೀಲಾ ಬಾ. ಅದೋ ಆ ಸ್ಥಳವು ಬಹಳ ಏಕಾಂತವಾಗಿದೆ. ಅಲ್ಲಿಗೆ ಹೋಗುವ! (**ಕೈಹಿಡಿದೆಳದೊಯ್ಯುವನು, ಪ್ರಭಾಕರನ ಮಿತ್ರ ಮೋಹನನು ಇನ್ನಿಬ್ಬರು ತನ್ನ ಮಿತ್ರರೊಂದಿಗೆ ಹೇಂಡ್ ಕೆಮರಾ ಹಿಡಿದು ಅವರನ್ನು ಅನುಸರಿಸುವನು.**)

**ಲೀಲಾ**—ಅದೋ ಮಿಸ್ಟರ್ ರಮಾನಾಥನ್! ಅದಾರು ನಮ್ಮ ಮೇಲೆ ಹೊಂಚುಹಾಕುತ್ತಿರುವುದು? ಅವರೇನೋ ದುರುದ್ದೇಶದಿಂದ ನಮ್ಮನ್ನನುಸರಿಸುವಂತಿದೆ. ನಾವು ಜಾಗ್ರತೆಯಿಂದಿರಬೇಕು.

**ರಮಾನಾಥನ್**—ಸತ್ತರವರು, ಘಟಿಂಗರು! ನಮ್ಮ ಸಮೀಪಕ್ಕೆ ಬಂದರೆ ತಲೆಯೊಡೆದು ಹಾಕುವೆನು. ನಿನಗಾವ ಭೀತಿಯೂ ಬೇಡ. ಬಾ ಲೀಲಾ! ಬಾ. (**ಎಳದೊಯ್ಯುವನು.**)

# ೨೦ನೇ ದೃಶ್ಯ—ಮನೆ

[ಪಂಚರು, ಕೊರಗ, ಸುಧೆಯರು ಅಪರಾಧಿಗಳೆಂದು ಒಮ್ಮತದ ಅಭಿಪ್ರಾಯ ವಿತ್ತರೂ ಜಡ್ಜ ಪ್ರಭಾಕರರಾಯನು ಅದಕ್ಕೆ ಪ್ರತಿಕೂಲನಾಗಿ ಅವರಿಬ್ಬರೂ ನಿರಪರಾಧಿಗಳೆಂದು ಬಿಟ್ಟುಬಿಡುವನು. ಜನತೆಯಲ್ಲೆಲ್ಲಾ ಈ ಕುರಿತು ವಿಸ್ಮಯವುಂಟಾಗುವುದು, ಪ್ರಭಾಕರರಾಯನು ತಂತಿ ಮೂಲಕ ತನ್ನ ಜಡ್ಜ ಪದವಿಗೆ ರಾಜಿನಾಮೆ ಕಳುಹಿಸಿ ಮೊದಲೇ ಮಾತಿತ್ತ ಮೇರೆಗೆ ಅಂದು ಬಾರ್ ಎಸೋಸಿಯೇಶನಿನವರು, ಬ್ಯಾರಿಯಿಂದ ವರ್ಗವಾಗಿ ಹೋಗುವ ಸಬ್ ಜಡ್ಜರಿಗೆ ವಿದಾಯವೀಯಲು ಏರ್ಪಡಿಸಿದ ಸಭೆಗೆ ಅಧ್ಯಕ್ಷನಾಗುವನು. ಈ ಸಭೆ ಮುಗಿಯುವಾಗ ರಾತ್ರಿ ೯ ಘಂಟೆ ದಾಟಿದುದರಿಂದ ಪ್ರಭಾಕರ ರಾಯನು ಬಹಳ ಅಸಹಿಷ್ಣುತೆಯಿಂದಲೂ ಅವಸರದಿಂದಲೂ ಮನೆಗೆ ಹೋಗಿ ದಫೇದಾರನನ್ನು ಮನೆಯ ವರಂಡಕ್ಕೆ ಕರೆದು ಒಂದೆಡೆ ಗುಟ್ಟಿನಲ್ಲಿ, ಕೊರಗ ಮತ್ತು ಸುಧೆಯರಿರುವ ಮನೆ ಎಲ್ಲಿಯೆಂದು ಕೂಡಲೆ ತಿಳಿಯಬರಬೇಕೆಂದು ಕಳುಹಿಸಿ ಮನೆಯೊಳಗೆ ಪ್ರವೇಶಿಸುವಾಗ ಲೀಲಾವತಿಯು ಸ್ವಲ್ಪ ದಿನಗಳ ಮೊದಲು ತಾನು ತಂತಿಕೊಟ್ಟ ಮೇರೆಗೆ ಬಂದಿದ್ದ ಮುಕುಂದರಾಯನೊಡನೆ ಪ್ರಭಾಕರರಾಯನನ್ನು ದೂರಿದೂಷಿಸುತ್ತಿರುವಳು]

**ಪ್ರಭಾಕರ**—ಒಹೋ, ತಂದೆಯವರು! ಯಾವಾಗ ಬಂದುದು?

**ಲೀಲಾ**—ಅವರು ಯಾವಾಗ ಬಂದರೆ ನಿಮಗೇನು? ನೀವಾ ವ್ಯಭಿಚಾರಿಣಿಯ ಮನೆಗೇನೇ ಹೋಗದೆ ಇಲ್ಲೇಕೆ ಬಂದುದು?

**ಮುಕುಂದ**—(ಈಸಿಚೇಯರಿನಿಂದ ಎದ್ದು ನಿಂತು ಮುಂದೆ ಬಂದು) ಪ್ರಭಾ, ಏನು ಮಾಡಿದೆ? ಘೋರ ಕೊಲೆಪಾತಕಿಗಳನ್ನು ಬಿಟ್ಟುಬಿಡುವುದೆಂದರೆ ಅರ್ಥವೇನು? ಅದು ಕೂಡಾ, ಪಂಚರೆಲ್ಲಾ ಒಮ್ಮತದಿಂದ ಅಪರಾಧಿಗಳೆಂದು ಹೇಳಿರುವಾಗ, ಅಪರಾಧಿಗಳೇ ತಾವು ಕೊಲೆ ಮಾಡಿದವರೆಂದು ಒಪ್ಪುವಾಗ, ಅವರನ್ನು ನಿರಪರಾಧಿಗಳೆಂದು ಬಿಟ್ಟುಬಿಡುವುದೆಂದರೆ ಏನನರ್ಥವಿದು! ಹೀಗೆ ಮಾಡಿದರೆ ನಿನ್ನ ಕೆಲಸ ಉಳಿವ ಬಗೆ ಹೇಗೆ? ನಿನ್ನ ಕೆಲಸ ಕಾಯಮ್ ಸಹ ಆಗಿಲ್ಲ!

**ಲೀಲಾ**—ಅವರಿಗೇನು? ಪಪ್ಪಾ ಇದ್ದಾರಲ್ಲ ಏನು ಮಾಡಿದರೂ ಸರಿ ಮಾಡ್ಲಿಕ್ಕಲ್ಲಿ? ಇವರಿಗೊಂದು ಕೆಲಸಕೊಡಿಸಿ ಪಪ್ಪಾ ಪಟ್ಟ ಪಾಡುಸಾಕು! ಇವರಿಂದ ಅವರ ಗೌರವಕ್ಕೆಷ್ಟು ಕುಂದುಂಟಾಗಿರುವುದೆಂದು ಹೇಳಿ ಪ್ರಯೋಜನವಿಲ್ಲ!

**ಪ್ರಭಾಕರ**—(ಲೀಲಾವತಿಯನ್ನು ಧುರಧುರನೆ ದಿಟ್ಟಿಸಿ) ಇನ್ನು ಮುಂದೆ ನಿನ್ನ ಪಪ್ಪನೂ ನೀನೂ ನಿಶ್ಚಿಂತರಾಗಿರಬಹುದು!

**ಮುಕುಂದ**—ಅಂದರೆ?

**ಪ್ರಭಾಕರ**—ಅಂದರೆ ನಾನಿಂದೇ ಜಡ್ಜ ಪದವಿಗೆ ರಾಜಿನಾಮೆಯಿತ್ತಿರುವೆನು.

**ಮುಕುಂದ**—ಏನು ಮಾಡಿದೆ ಪ್ರಭಾಕರ? ಹೇಳು, ಏನು ಮಾಡಿದೆ ಹೇಳು!

**ಪ್ರಭಾಕರ**—ಒಮ್ಮೆ ಹೇಳಿದುದಲ್ಲವೇ?

**ಮುಕುಂದ**—ಏನು ಒಮ್ಮೆ ಹೇಳಿದುದು?

**ಪ್ರಭಾಕರ**—ನಾನು ಇಂದೇ ತಂತಿಮೂಲಕ ನನ್ನ ರಾಜಿನಾಮೆ ಕಳುಹಿಸಿರುವೆನೆಂದು.

**ಮುಕುಂದ**—ಅಯ್ಯೋ ಮಗ ನಿನ್ನ ಬುದ್ಧಿಯೇ! ( **ತಲೆಗೆ ಬಡಕೊಂಡು ಕಣ್ಣು ಕತ್ತಲೆ ಬಂದು ಅಲ್ಲಿಯೇ ಕೂತ ಕೊಳ್ಳುವನು.**)

ಲೀಲಾ—ಇವರು ಎಷ್ಟಕ್ಕೂ ಕೆಲಸ ಇಟ್ಟುಕೊಳ್ಳಲಿಕ್ಕಿಲ್ಲೆಂದು ಪಪ್ಪಾ ಹೇಳುತ್ತಿದ್ದರು. ಅಂತೆಯೇ ಆಯಿತು. ಇನ್ನು ಬಿಕ್ಕೆ ಬೇಡಿದರೆ ಸರಿ! (**ದಫೇದಾರನು ಅವಸರದಿಂದ ಪ್ರವೇಶಿಸಿ**) "ರಾಯರೇ! ರಾಯರೇ!!" (**ಲೀಲಾವತಿಯನ್ನು ಕಂಡು ಸುಮ್ಮನಾಗುವನು.**)

**ಪ್ರಭಾಕರ**—ಏನು, ಅವರು ಸಿಕ್ಕಿದರೇ?

**ದಫೇದಾರ**—ಇಲ್ಲ ರಾಯರೇ?

**ಪ್ರಭಾಕರ**—ಇಲ್ಲ! ನೀನು ಯಾವ ಕೆಲಸಕ್ಕೆ ಹೋದರೂ ಹಾಗೆ!

**ದಫೇದಾರ**—ಅವರು ಬಳ್ಳಾರಿ ಪಟ್ಟಣವನ್ನೇ ಬಿಟ್ಟುಹೋಗಿದ್ದಾರಂತೆ ರಾಯರೆ. ಜನರೆಲ್ಲಾ ಅವರ ಕುರಿತೇ ಮಾತಾಡುತ್ತಿರುವರು.

**ಪ್ರಭಾಕರ**—(**ಬಹಳ ಅಸಹಿಷ್ಣುತೆಯಿಂದ**) ಯಾವಾಗ ಬಿಟ್ಟುಹೋದುದಂತೆ?

**ದಫೇದಾರ**—ನೀವು ಅವರನ್ನು ನಿರಪರಾಧಿಗಳೆಂದು ಬಿಟ್ಟುಬಿಟ್ಟೊಡನೆಯೇ ಅವರು ಕೂಡಲೆ ಮನೆಗೆ ಹೋಗಿ ಕತ್ತಲೆಯಾಗುವುದರೊಳಗೇನೇ ಒಂದು ಟೇಕ್ಸಿ ಮಾಡಿ ಹೋಗಿಬಿಟ್ಟಿರುವರಂತೆ.

**ಪ್ರಭಾಕರ**—ಎಲ್ಲಿ ಹೋಗಿರುವರಂತೆ?

**ದಫೇದಾರ**—ಎಲ್ಲಿ ಹೋಗಿರುವರೆಂದು ಒಬ್ಬರಿಗೂ ತಿಳಿಯದು ರಾಯರೆ.

**ಪ್ರಭಾಕರ**—ಆಯ್ತು, ಸರಿ ಅತ್ತ (**ಡಬ್ಬನೆ ಬಾಗಿಲು ಹಾಕುವನು**)

**ಮುಕುಂದ**—(**ಕಟಕಟನೆ ಹಲ್ಲು ಕಡಿಯುತ್ತಾ ಎದ್ದುನಿಂತು**) ಇಷ್ಟಕ್ಕೆಲ್ಲಾ ಕಾರಣಳು ಆ ವ್ಯಭಿಚಾರಿಣಿ, ಕೊಲೆಪಾತಕಿ ಸುಧಾ! ಆ ದುರಾಚಾರಿಣಿಗೆ ನಾವು

ಕೂಡಾ ಬರಲಿಲ್ಲವಲ್ಲ! ಅಹ! ಎಂತಹ ದುರದೃಷ್ಟ! ಆ ಭಿಕಾರಿಣಿಯೂ ಇಲ್ಲಿಗೇನೇ ಬಂದು ವಾಸಿಸಿಕೊಂಡಿರಬೇಕೇ?

**ಪ್ರಭಾಕರ**—(ಕೋಪ ಸಂತಾಪಾತಿಶಯದಿಂದ ಉನ್ಮತ್ತನಂತಾಗಿ ಮುಕುಂದರಾಯರ ಬಳಿಗೆ ಹೋಗಿ ಅವರ ಬಲಗೈಯನ್ನು ಗಟ್ಟಿಯಾಗಿ ಹಿಡಿದು ತನಗವರು ಒಂದನಿಗೆ ಕಳುಹಿಸಿದ ಸುಧೆಯು ಮತ್ತು ಇನ್ನೊಬ್ಬರ ಭಾವಚಿತ್ರವನ್ನು ಕಿಸೆಯಿಂದ ತೆಗೆದು) ಅಪ್ಪಾ, ಸತ್ಯ ಹೇಳಿ, ಇಲ್ಲವಾದರೆ ಜಾಗ್ರತೆ!

**ಲೀಲಾ**—(ಓಡಿಬಂದು) ನಿಮಗೇನು ಹುಚ್ಚು ಹಿಡಿದಿರುವುದೇ? ಅಹ! ಆ ಭಿಕಾರಿಣಿಯು ಎಂತಹ ಮಾಟ ಮಾಡಿರುವಳೋ! ಬಿಡಿರಿ, ಮಾವನ ಕೈ ಬಿಡಿರಿ. (ಕೈ ಬಿಡಿಸಲೆತ್ನಿಸುವಳು)

**ಪ್ರಭಾಕರ**—(ಲೀಲಾವತಿಯನ್ನು ಕುತ್ತಿಗೆಗೆ ಕೈಹಾಕಿ ದೂಡಿಬಿಡುವನು. ಅವಳು ಧೊಪ್ಪನೆ ನೆಲಕ್ಕೆ ಬೀಳುವಳು.) ಇನ್ನು ಹತ್ತಿರ ಬಂದರೆ ಮೊದಲು ನಿನ್ನನ್ನು ಕತ್ತು ಹಿಸುಕಿ ಕೊಲ್ಲುವೆನು! (ಬೆದರಿಸುವನು)

**ಲೀಲಾ**—ಅಯ್ಯೋ, ಹುಚ್ಚು! ಹುಚ್ಚು!! ದಫೆದಾರ್! ದಫೆದಾರ್!! (ಕೂಗುವಳು. ದಫೆದಾರನು ಓಡಿಬಂದು ಬಾಗಿಲು ಬಡಿಯುವನು.)

**ಪ್ರಭಾಕರ**—ಯಾರದು ಬಾಗಿಲು ಬಡಿಯುವುದು? (ಮುಕುಂದರಾಯರ ಕೈ ಬಿಟ್ಟು ಲೀಲಾವತಿಯ ಎರಡು ಕೈಗಳನ್ನೂ ಹಿಡಿದು ತಿರುವಿ ಒಂದು ಕುಸಿಚೇರಿಗೆ ದೂಡಿ) ಸುಮ್ಮನೆ ಸುಯ್ಲೊತ್ತದೆ ಕುಳಿತೆಯಾದರಾಯಿತು! ಇಲ್ಲವಾದರೆ ನಿನ್ನ ಪ್ರಾಣ ಉಳಿಯಲಿಕ್ಕಿಲ್ಲ. ನೀಚಳೇ, ವ್ಯಭಿಚಾರಿಣಿ ಸುಧೆಯೋ ನೀನೋ ಎಂಬುದನ್ನು ಈಗಲೇ ತಿಳಿಯುವೆ!

**ಮುಕುಂದ**—(ತಬ್ಬಿಬ್ಬಾಗಿ ಓಡಿಬಂದು) ಪ್ರಭಾ! ಪ್ರಭಾ! ಏನಿದು? ಏನಾಗಿದೆ ನಿನಗಿಂದು? (ಎರಡು ಕೈಗಳಿಂದಲೂ ಪ್ರಭಾಕರನ ಭುಜಹಿಡಿದೆಳೆಯುವನು.)

**ಪ್ರಭಾಕರ**—ನನ್ನ ಮೈ ಮುಟ್ಟಬೇಡಿ, ದೂರ ಸರಿಯಿರಿ! ಇಷ್ಟಕ್ಕೆಲ್ಲಾ ಮೂಲಕಾರಣ ನೀವೆ. ನಿಮ್ಮನ್ನು ಅಪ್ಪನೆಂದು ಕರೆಯಲೂ ಹೇಯವೆನಿಸುವುದು ನನಗೆ.

**ಮುಕುಂದ**—ನಾನೇನು ಮಾಡಿದೆ? (ಬಾಯ್ಬಿಟ್ಟು ಅಳುತ್ತಾ) ನಿನ್ನನ್ನು ಪ್ರಾಣಕ್ಕಿಂತಲೂ....

**ಪ್ರಭಾಕರ**—ಸಾಕು ಸಾಕು ನಟನೆಯೆಲ್ಲಾ! ಈ 'ಫೋಟೋ' ಯಾರದೆಂದು ಮೊದಲು ಹೇಳಿ.

**ಮುಕುಂದ**—(ಫೋಟೋವನ್ನು ಪ್ರಭಾಕರನಿಂದ ತೆಗೆದುಕೊಂಡು ಪರೀಕ್ಷಿಸಿ) ಇದಾ ವ್ಯಭಿಚಾರಿಣಿಯ ಫೋಟೋ.

**ಪ್ರಭಾಕರ**—ಅವಳ ಸಮೀಪ ನಿಂತವರಾರು?

**ಮುಕುಂದ**—ಮತ್ತಾರು? ಅವಳ ಮಿಂಡಂದಿರು. (ಫೋಟೋವನ್ನು ಹರಿಯಲೆತ್ನಿಸುವನು.

**ಪ್ರಭಾಕರ**—(ಮುಕುಂದನ ಕೈಯಿಂದ ಫೋಟೋವನ್ನು ಕಸಕೊಂಡು) ಇಷ್ಟು ಪ್ರಾಯವಾದುದೇಕೆ ನಿಮಗೆ? (ಔಡುಗಚ್ಚಿ) ನೀವು ಸತ್ಯ ಸಂಗತಿಯನ್ನು ಹೇಳುವಿರೋ ಇಲ್ಲವೋ? (ಮುಂದರಿಯುವನು)

**ಮುಕುಂದ**—(ಬೆದರಿ ಹಿಂದೆಸರಿದು) ಇನ್ನೇನು ಸತ್ಯಸಂಗತಿ? ಹೇಳಿದೆನಲ್ಲವೆ?

**ಪ್ರಭಾಕರ**—ಏನು, ಸುಧೆಯು ವ್ಯಭಿಚಾರಿಣಿಯೇ? ದುರಾಚಾರಿಣಿಯೇ? ಭಿಕಾರಿಣಿಯೇ? ಕೊಲೆಪಾತಕಿಯೇ? ನೀವಿಬ್ಬರು ಸುಬಗರೇ? ಸದಾಚಾರಿಗಳೇ? ಹ-ಹ-ಹ! (ಕಟಕಟನೆ ಹಲ್ಲುಕಡಿಯುತ್ತಾ ಮುಕುಂದರಾಯನ ಕತ್ತು ಹಿಸುಕಲೆಂಬಂತೆ ವಿಕಾರ ಮುಖ ಮುದ್ರೆಯಿಂದ ಮತ್ತೂ ಮುಂದುವರಿಯುವನು )

**ಮುಕುಂದ**—(ದಿಗಿಲುಗೊಂಡು ಗೋಡೆಯ ಮೂಲೆಗೆ ಸರಿದುನಿಂತು) ಪ್ರಭಾಕರ, ಇದೇನು ಮಾಡುವೆ? ನಾನು ನಿನ್ನ ತಂದೆಯಲ್ಲವೇ? ನಾನೇನು ಮಾಡಿದೆ ನಿನಗೆ?

**ಪ್ರಭಾಕರ**—ಹ–ಹ-ಹ–ಹ! ನೀವೇನೂ ಮಾಡಿಲ್ಲವೇ? ಸತ್ಯ ಹೇಳದಿದ್ದರೆ, ಪಿತೃಹತ್ಯೆಗೂ ಒಂದಿಷ್ಟು ಗಣ್ಯಮಾಡದೆ ಕತ್ತು ಹಿಸುಕುವೆನು, ಜಾಗ್ರತೆ! ಸುಮ್ಮನೆ ನನ್ನ ಕೈಗೆ ಸಿಕ್ಕಿ ಪ್ರಾಣ ಕಳಕೊಳ್ಳಬೇಡಿ. ಒಳ್ಳೇ ಮಾತಿನಿಂದ ನಿಜ ಸಂಗತಿಯನ್ನೆಲ್ಲಾ ತಿಳಿಸಿರಿ. (ಮತ್ತೂ ಮುಂದೊತ್ತುವನು)

**ಮುಕುಂದ**—(ಭೀತಿಗೊಂಡು ನಡುಗುತ್ತಾ) ಪ್ರಭಾ, ಕ್ಷಮಿಸು ಕ್ಷಮಿಸು! ದೂರ ಹೋಗು, ಹೇಳುವೆನು.

**ಪ್ರಭಾಕರ**—ಹೇಳುವಿರಾ? ಹ-ಹ-ಹ! ಹೇಳುವಿರಾದರೆ ಹೋಗುವೆನು, ಎಷ್ಟು ದೂರ ಬೇಕಾದರೂ ಹೋಗುವೆನು. ಹ-ಹ-ಹ-ಹ! (ಮುಕುಂದರಾಯನಿಂದ ತುಸು ದೂರ ಸರಿದುನಿಂತು) ಹೇಳಿ, ಬೇಗ ಹೇಳಿ! ಇದಾರು ಸುಧೆಯ ಮಂಚದ ಬಳಿ ನಿಂತವರು?

**ಮುಕುಂದ**—ಒಬ್ಬ ಅಮೃತರಾಯ, ಇನ್ನೊಬ್ಬ ಯಾರೋ ಅವನ ಸ್ನೇಹಿತ

**ಪ್ರಭಾಕರ**—ಹ-ಹ-ಹ! ಅಮೃತರಾಯನೇ? ಅವನೇಕೆ ಅಲ್ಲಿ ನಿಂತುದು?

**ಮುಕುಂದ**—ಪ್ರಭಾ, ದಯವಿಟ್ಟು ಕ್ಷಮಿಸುವಿಯಾದರೆ ಹೇಳುವೆನು.

**ಪ್ರಭಾಕರ**—ಆಯ್ತು ಹೇಳಿ.

**ಮುಕುಂದ**—ಸುಧೆಯು ವ್ಯಭಿಚಾರಿಣಿಯೆಂದು ನೀನು ನಂಬುವಂತೆ ಮಾಡಲು ನಾನು ಮಾಡಿದ ತಂತ್ರವಿದು.

**ಪ್ರಭಾಕರ**—ನೀವು ಮಾಡಿದ ತಂತ್ರವೇ? ಹ-ಹ-ಹ! ನಿಮಗೊಂದಿಷ್ಟು ಕರುಣೆಯ ಕರುಳಾದರೂ ಇರಬೇಡವೇ? ನಿಮ್ಮದು ಮಾನವ ಹೃದಯವೆನ್ನ ಲಾಗುವುದೇ?

**ಮುಕುಂದ**—ಕ್ಷಮಿಸು ಪ್ರಭಾ ಕ್ಷಮಿಸು! ನಾನು ಮಾಡಿದ ಅಪರಾಧಗಳ ನ್ನೆಲ್ಲಾ ಕ್ಷಮಿಸು! ನಿನ್ನ ಹಿತದೃಷ್ಟಿಯಿಂದ........

**ಪ್ರಭಾಕರ**—ಸಾಕು ಸಾಕು ನನ್ನ ಹಿತದೃಷ್ಟಿ! ನಿಮ್ಮಿಂದಾಗಿ ನಾನು ಪಟ್ಟ ಸುಖಸಾಕು! ಅದಂತಿರಲಿ, ಸುಧೆಯು ವ್ಯಭಿಚಾರಿಣಿಯಲ್ಲೆಂಬುದುನಿಶ್ಚಯವಷ್ಟೆ?

**ಮುಕುಂದ**—ನಿಶ್ಚಯ ಪ್ರಭಾ ನಿಶ್ಚಯ! ಆವಳು ಅಕಳಂಕಿನಿ, ನಿರ್ದೋಷಿ. ಎಲ್ಲಾ ಮಾಡಿದವ ನಾನು.

**ಪ್ರಭಾಕರ**—ಈ ಮುದಿಪ್ರಾಯದಲ್ಲಿ ನೀವು ನಿರ್ದೋಷಿ ತರುಣಿಯು ವ್ಯಭಿ ಚಾರಿಣಿಯೆಂದು ಸಿದ್ಧಪಡಿಸುವ ತಂತ್ರ ಹೂಡಿ ಸುಧೆಯನ್ನೂ ನನ್ನನ್ನೂ ಸಜೀವವಾಗಿ ಕೊಂದು ಘೋರ ಪಾಪ ಮಾಡಿರುವಿರಿ. ಸುಧೆಯು ಅಕಳಂಕಿನಿ ಯೆಂದಾದ ಮೇಲೆ, ನಾನೀಗ ನಿಜವಾದ ವ್ಯಭಿಚಾರಿಣಿ ಯಾರೆಂಬುದನ್ನು ನಿಮಗೆ ಸಿದ್ಧಗೊಳಿಸಿ ನೀವು ಕಟ್ಟಿಕೊಂಡಿರುವ ಭ್ರಾಂತಿಯನ್ನು ತೊಲಗಿಸುವೆನು.

**ಮುಕುಂದ**—ಯಾರು! ನಿಜವಾದ ವ್ಯಭಿಚಾರಿಣಿ ಯಾರು ಪ್ರಭಾ?

**ಪ್ರಭಾಕರ**—(**ಇನ್ನೊಂದು 'ಫೋಟೋ'ವನ್ನು ಕಿಸೆಯಿಂದ ತೆಗೆದು ತೋರಿಸಿ**) ಇದಾರ ಫೋಟೋ ಎಂದು ಹೇಳಬಲ್ಲಿರಾ?

**ಮುಕುಂದ**—(**'ಫೋಟೋ' ತೆಗೆದುಕೊಂಡು ಬಾರಿ ಬಾರಿ ಪರೀಕ್ಷಿಸಿ**) ಇದರ ಲ್ಲೊಂದು ನಮ್ಮ ಲೀಲಾವತಿಯಲ್ಲವೇ?

**ಪ್ರಭಾಕರ**—ನನ್ನೊಡನೇನು ಕೇಳುವುದು? ನಿಮಗೆ ತೋರುವುದಿಲ್ಲವೇ?

**ಮುಕುಂದ**—(**ಪುನಃ ಪರೀಕ್ಷಿಸಿ**) ಹೌದು ಲೀಲಾವತಿ. ಇನ್ನೊಂದಾರು? (**ಬಹಳ ತಲ್ಲಣಗೊಳ್ಳುವನು**)

**ಪ್ರಭಾಕರ**—ಇನ್ನೊಂದಾರೆಂದು ನಾನು ಹೇಳಿ ಫಲವಿಲ್ಲ. ನಿಮ್ಮ ಸೊಸೆಯೊಡನೆ ಕೇಳುವ ಬನ್ನಿ. (**ಮುಕುಂದರಾಯನನ್ನು ಕೈಹಿಡಿದೆಳೆಕೊಂಡು, ಬೆರಗಾಗಿ ಈಸಿಚೇಯರಿನಲ್ಲೇ ಕುಳಿತು ಕಣ್ಣುಕಣ್ಣು ನೋಡುತ್ತಿರುವ ಲೀಲಾವತಿಯು ಬಳಿಗೆ ಕರದೊಯ್ದು**) ಹುಂ, ಸಕಲಗುಣಸಂಪನ್ನೆಯ ಸವಾರಿ ಇತ್ತ ಬರೋಣಾಗಲಿ! (**ಲೀಲಾವತಿಯು ಕದಲದೆ ಕೂತಲ್ಲಿಯೇ ಇರುವಳು.**) ಏನೂ ತಿಳಿಯದವಳಂತೆ ಕುಳಿತಿರುವೆಯಾ ನೀಚಳೇ! ಗುಟ್ಟೆಲ್ಲಾ ಬಟ್ಟಬಯಲಾದ ಮೇಲೆ ಇನ್ನೂ ನಿನ್ನ ನಟನೆಯೇ? ಬಾ ಇಲ್ಲಿ (**ರಟ್ಟೆ ಹಿಡಿದು ಎಳೆದೊಯ್ಯುವನು**)

**ಲೀಲಾ**—ಏನು ಮಾಡುತ್ತೀರಿ ನೋಡುವ! ಕೊಲ್ಲುವುದಾದರೆ ಕೊಲ್ಲಿ!

**ಪ್ರಭಾಕರ**—ನನಗೆ ನಿನ್ನನ್ನು ಕೊಲ್ಲಬೇಕೆಂದಿಲ್ಲ. ಸುಧೆಯು ನಿಷ್ಕಳಂಕಿನಿಯೆಂದು ಅಪ್ಪನೆ ಈಗ ನಿನ್ನಿದಿರಲ್ಲೇ ಒಪ್ಪಿ ದೃಢಪಡಿಸಿದರಲ್ಲವೇ? ತುಚ್ಛ ವ್ಯಭಿಚಾರಿಣಿಯು ಸುಧೆಯಲ್ಲ, ನೀನೆಂದು ಸಿದ್ಧವಾದರೆ ಸಾಕು. ವ್ಯಭಿಚಾರಿಣಿ, ದುರಾಚಾರಿಣಿ, ಭಿಕಾರಿಣಿ ಎಂದೆಲ್ಲಾ ನೀನು ಸುಧೆಯ ಮೇಲೆ ಹೃದಯರಹಿತವಾಗಿ ಎಡೆಬಿಡದೆ ಹೊರಿಸುತ್ತಿದ್ದ ಕ್ರೂರ ನಿಂದೆಯ ಲಾಂಛನವನ್ನು ನೀನೇ ನಗೆನಾಚಿಕೆಯಿಲ್ಲದೆ ಹೊತ್ತು ತಿರುಗುವಂತಾದರಾಯಿತು!

**ಲೀಲಾ**—ನಾನೇನು ಮಾಡಿದೆ?

**ಪ್ರಭಾಕರ**—ನೀನೇನು ಮಾಡಿರುವೆಯೆಂಬುದನ್ನು ನೀನೇ ನೋಡಿ ಹೇಳು. ಇದೋ ಇದಾರ ಫೊಟೋ? ನೀನು ಚುಂಬಿಸುತ್ತಿರುವ ಆ ದುರಾತ್ಮನಾರು? ಹೇಳು. ಬೇಗ ಹೇಳು. (**ಲೀಲಾವತಿಯು ತುಸು ಸಮಯ ಸ್ತಬ್ಧಳಾಗಿ ನಿಲ್ಲುವಳು**) ಯಾಕೆ ಮೂರ್ತಿಯಂತೆ ನಿಂತಿರುವೆ? ಇದು ನಿನ್ನ ಫೊಟೋ ಅಲ್ಲವೇ?

**ಲೀಲಾ**—(**ಥಕ್ಕನೆ ಪ್ರಸಂಗಾವಧಾನತೆ ತಳೆದು**) ನೋಡುವ, ನಾನು ಸರಿನೋಡಬೇಕದನ್ನು. ಯಾರ ಫೊಟೋವೋ ಏನೋ?

**ಪ್ರಭಾಕರ**—ಯಾರ ಫೊಟೋವೋ ಏನೋ! ದುರಾಚಾರಿಣಿ, ನಿನ್ನ ಫೊಟೋ ಅಲ್ಲವೇ ಇದು? ನೋಡು ಚೆನ್ನಾಗಿ ನೋಡು! (**ಜುಟ್ಟು ಹಿಡಿದು ಫೊಟೋದ ಕಡೆಗೆ ತಲೆ ಬಗ್ಗಿಸುವನು. ಲೀಲಾವತಿಯು ಅಲ್ಲಿಂದ ಫೋಟೋವನ್ನು ಎಳಕೊಳ್ಳಲೆತ್ನಿಸುವಳು ಆಗ ಪ್ರಭಾಕರನು ಅವಳ ಜುಟ್ಟು ಮತ್ತೂ ಗಟ್ಟಿಯಾಗಿ ಹಿಡಿದು ದೂರಕ್ಕೆ ದೂಡಿ**) ಇದೇನು ಮೂರ್ಖತನ ನಿನ್ನದು? ನೀನೀಗ ಇದೊಂದು ಪ್ರತಿಯನ್ನು ಹರಿದುಹಾಕಿದರೆ ಇನ್ನು ಪ್ರತಿಗಳಿಲ್ಲವೆ? ಎಷ್ಟು ಪ್ರತಿಬೇಕು ನಿನಗೆ?

ವ್ಯಭಿಚಾರಿಣಿ ಯಾರು



ಪ್ರಭಾಕರ—ದುರಾತ್ಮಳೆ! ಈಗ ವ್ಯಭಿಚಾರಿಣಿ ಯಾರೆಂದು ಹೇಳು.

(ಪುಟ 75)

**ಲೀಲಾ**—ಬಿಡಿ, ನನ್ನನ್ನು ಬಿಡಿ! ಯಾರೋ ನನ್ನ ವೈರಿಗಳು....

**ಪ್ರಭಾಕರ**—ಮುಚ್ಚು ಬಾಯಿ! ನಿನ್ನ ಕ್ಷುದ್ರ ಹೃದಯದ ಕೊಳೆಯು ಕೊಳೆತು ಹುಳುವಾಗಲಿ! ಬಾಯಿಂದದನ್ನು ಹೊರಹಾಕಿ ವಾತಾವರಣವನ್ನು ಕೊಳಕುಗೊಳಿಸಬೇಡ. ನೋಡು, ಇದು ನಿನ್ನ ಫೂಟೋ ಹೌದೋ ಅಲ್ಲವೋ ಹೇಳು.

**ಲೀಲಾ**—(ಕ್ರುದ್ಧಳಾಗಿ) ಹೌದು, ಏನು ಮಾಡುವಿರಿ? ಬಿಡಿ ನನ್ನ ಕೂದಲು! (ಒದರಾಡುವಳು)

**ಪ್ರಭಾಕರ**—ತಡೆ ತಡೆ! ಅಷ್ಟು ಗೌಜಬೇಡ! (**ಕೂದಲನ್ನು ಮತ್ತೂ ಗಟ್ಟಿಯಾಗಿ ಹಿಡಿಯುವನು.**)

**ಲೀಲಾ**—ಅಯ್ಯೋ! (ಗಟ್ಟಿಯಾಗಿ ಕೂಗಿ) ಮಾವ, ನಿಮಗಿದು ಚಂದ ತೋರುವುದೇ? ನೀವು ಕಣ್ಣು ಕಣ್ಣು ನೋಡುತ್ತಿರುವುದೇ?

**ಮುಕುಂದ**—ಪ್ರಭಾ, ಇದೇನವಳನ್ನು ಕೊಲ್ಲುವೆಯಾ? (**ಬಿಡಿಸಲು ಮುಂದುವರಿಯುವನು**)

**ಪ್ರಭಾಕರ**—ನೀವು ದೂರ ನಿಲ್ಲಿರಿ. ಅವಳು ಇಷ್ಟೊಂದು ಪ್ರೀತಿಯಿಂದ ಚುಂಬಿಸುವ ಆ ನೀಚನಾರೆಂದು ಹೇಳುವ ವರೆಗೆ ನಾನವಳನ್ನು ಬಿಡಲಾರೆ.

**ಲೀಲಾ**—ಅವರು ನನಗೆ ಬೇಕಾದವರೊಬ್ಬರು.

**ಪ್ರಭಾಕರ**—ನಿನಗೆ ಬೇಕಾದವನೆಂದು ನೀನು ಪ್ರತ್ಯೇಕ ಹೇಳಬೇಕೇ? ಬೇಡವಾದವನನ್ನು ನೀನು ಚುಂಬಿಸುವೆಯಾ ದುರಾಚಾರಿಣಿ? ಅವನ ಹೆಸರೇನು ಹೇಳು? ಬೇಗ ಹೇಳು! (**ಮತ್ತೂ ಕೂದಲನ್ನು ಗಟ್ಟಿಯಾಗಿ ಹಿಡಿದೆಳೆಯುವನು**)

**ಲೀಲಾ**—ಅಯ್ಯೋಯ್ಯೋ! (**ಮೊದಲಿಗಿಂತಲೂ ಗಟ್ಟಿಯಾಗಿ ಕೂಗಿ**) ಅದು ಡಾಕ್ಟರ್ ರಮಾನಾಥನ್.

**ಪ್ರಭಾಕರ**—(**ಕ್ರೋಧೋನ್ಮತ್ತನಾಗಿ ಲೀಲಾವತಿಯನ್ನು ನೆಲಕ್ಕೆ ಕೆಡಹಿ**) ಡಾಕ್ಟರ್ ರಮಾನಾಥನ್! ದುರಾತ್ಮಳೇ! ಈಗ ವ್ಯಭಿಚಾರಿಣಿ ಯಾರೆಂದು ಹೇಳು! ಯಾರು? ವ್ಯಭಿಚಾರಿಣಿ ಯಾರು? ನೀನೋ ಸುಧೆಯೋ? (**ಲೀಲಾವತಿಯು ಸುಮ್ಮಗೆ ಬಿದ್ದುಕೊಳ್ಳುವಳು ಅವಳ ಸೊಂಟಕ್ಕೆ ಬಲವಾಗಿ ತುಳಿದು**) ಹೇಳು, ಬೇಗ ಹೇಳು.

**ಲೀಲಾ**—ಅಯ್ಯೋ, ಸತ್ತೆನು! ಸತ್ತೆನು! ಮಾವ! ಮಾವ!

**ಪ್ರಭಾಕರ** —ಸಾಯುವುದೇ? ಇನ್ನೆಷ್ಟು ಕರ್ಮವನ್ನನುಭವಿಸಲಿರುವುದೊ ನಿನಗೆ! ವ್ಯಭಿಚಾರಿಣಿ ಯಾರೆಂದು ಹೇಳು! (ಪುನಃ ತುಳಿಯುತ್ತಿರುವನು)

**ಲೀಲಾ**—(ದೂರ ಹೊರಳಿ) ನಾನು.

**ಪ್ರಭಾಕರ**—ಹೇಳು, 'ನಾನು ವ್ಯಭಿಚಾರಿಣಿ! ನಾನು ವ್ಯಭಿಚಾರಿಣಿ!! ನಾನು ವ್ಯಭಿಚಾರಿಣಿ!!!' ಎಂದು ಇನ್ನೊಂದು ಹತ್ತು ಸಲ ಹೇಳು! (**ಲೀಲಾವತಿಯು ಸುಮ್ಮನಿರುವಳು**) ಆ ನಿರ್ದೋಷಿ ಅಬಲೆಯು, ಆ ಪರಮಪಾವನೆಯು, ವ್ಯಭಿಚಾರಿಣಿ, ಭಿಕಾರಿಣಿ, ದುರಾಚಾರಿಣಿ, ಕೊಲೆಪಾತಕಿಯೆಂದೆಲ್ಲಾ ನೂರಾರು ಸಲ ಹೇಳುತ್ತಿದ್ದೆಯಲ್ಲಾ? ನಾನು ವ್ಯಭಿಚಾರಿಣಿ, ಸುಧೆಯು ನಿಷ್ಕಳಂಕಿನಿಯೆಂದು ಕೆಲವೊಮ್ಮೆಯಾದರೂ ಹೇಳಿ ಆ ಘೋರ ಪಾಪವನ್ನು ತುಸು ಕಡಿಮೆಮಾಡಿಕೊ. ನೀನೀ ಮಂತ್ರವನ್ನು ಸಾಯುವವರೆಗೆ ಅನುದಿನ ಜಪಿಸಿದರೂ ನಿನ್ನ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವಾಗಲಾರದು. ಹೇಳು ಬಾಯ್ಬಿಟ್ಟು ಹೇಳು! ಎಲ್ಲಿ ಹೋಯಿತು ನಿನ್ನ ಮೊದಲಿನ ಒದರಾಟ! (ಪುನಃ ತುಳಿಯುವನು)

**ಲೀಲಾ**—ವ್ಯಭಿಚಾರಿಣಿ ನಾನು, ಸುಧೆ ಅಕಳಂಕಿನಿ. (ಸುಮ್ಮನಾಗುವಳು)

**ಪ್ರಭಾಕರ**—ಅಪ್ಪಾ, ತಿಳಿಯಿತಲ್ಲವೇ ಈಗ ವ್ಯಭಿಚಾರಿಣಿ ಯಾರೆಂದು? ಸುಧೆಯ ಜೀವನ ಸುಖವನ್ನು ಮೊಗ್ಗೆಯಲ್ಲೇ ಮುರಿದು ಎಂತಹ ಕುಲಕಳಂಕಿನಿಯನ್ನು ನನ್ನ ಕುತ್ತಿಗೆಗೆ ಕಟ್ಟಿರುವಿರೆಂದು? ಈ ದುರಾಚಾರಿಣಿಯು ಹವೆ ಬದಲಾವಣೆಗೆಂದು ಮದ್ರಾಸಿಗೆ ಹೋಗಿ ತಿಂಗಳುಗಟ್ಲೆ ಕಳೆಯುತ್ತಿದ್ದುದು ಆ ದುರಾತ್ಮ ಡಾಕ್ಟರ್ ರಮಾನಾಥನೊಂದಿಗೆ! ನಿಮ್ಮ ೧೦ ಸಾವಿರ ರೂಪಾಯಿ ವರದಕ್ಷಿಣೆ, ಹೈಕೋರ್ಟು ಜಡ್ಜರ ನೆಂಟಸ್ತಿಕೆ, ಜಿಲ್ಲಾ ಜಡ್ಜ ಹುದ್ದೆ, ಎಲ್ಲವನ್ನೂ ಕಟ್ಟಿಕೊಂಡು ನೀವೇ ಸುಖಪಡಿರಿ! ನಾನು ಪಟ್ಟ ಸುಖ ಸಾಕು! ಒಂದಿಷ್ಟು ಅಂತಃಕರಣವಿಲ್ಲದೆ ದೀನ ನಿರ್ದುಷ್ಟ ಅಬಲೆಯ ಕುತ್ತಿಗೆ ಕೊಯ್ದವರು ನೀವು! ಅವಳನ್ನು ಜೀವನ್ಮೃತಳಾಗಿ ಮಾಡಿದವರು! ಸಚ್ಚರಿತೆ ತುಳಸೀಬಾಯಿಯವರ ಅಪಮೃತ್ಯುವಿಗೆ ಕಾರಣರಾದವರು! ಈ ಮುದಿ ಪ್ರಾಯದಲ್ಲಿ ನೀವು ಸಂಪಾದಿಸಿದ ಪುಣ್ಯದ ರಾಶಿಯಿದು! ಅದನ್ನು ನೋಡಿ ನೋಡಿ ಆನಂದಿಸಿ ಸುಖವಾಗಿ ಜೀವನ ಕಳೆಯಿರಿ! ಬೇಕಾದರೆ ನಿಮ್ಮೊ ಸೊಸೆಯೂ ನಿಮ್ಮ ಸುಖದಲ್ಲಿ ಪಾಲು ಪಡೆಯಲಿ. ನಿಮ್ಮ ನನ್ನ ಸಂಬಂಧವಿಂದಿಗೆ ಕಡಿಯಿತು. ನಾನಿನ್ನು ನನ್ನ ದಾರಿ ನೋಡುವೆನು. ನೀವು ನಿಮ್ಮ ದಾರಿ ಹಿಡಿಯಿರಿ. (**ಹೋಗಲನುನಾಗುವನು**)

**ಮುಕುಂದ**—ಪ್ರಭಾ, ಪ್ರಭಾ! ಎಲ್ಲಿ ಹೋಗುವೆ? ಒಬ್ಬನೇ ಒಬ್ಬ ಪುತ್ರನಾದ ನೀನೂ ನನ್ನ ಕೈಬಿಡುವೆಯಾ? ಕ್ಷಮಿಸು. ನಾನೇನು ಅಪರಾಧ ಮಾಡಿದುದಿದ್ದರೂ ಒಮ್ಮೆ ಕ್ಷಮಿಸು. ಕ್ಷಮಿಸು ಪ್ರಭಾ ಕ್ಷಮಿಸು! (**ಪ್ರಭಾಕರನನ್ನು ಬಿಗಿದಪ್ಪುವನು. ಪ್ರಭಾಕರನು ಬಿಡಿಸಿಕೊಂಡು ದೂಡಿ ಹೋಗಿಬಿಡುವನು.**)

---

# ೨೧ನೇ ದೃಶ್ಯ—ಗುಡ್ಡಮಾರ್ಗ

[**ಗುಡ್ಡ ಮಾರ್ಗದಲ್ಲಿ ಪ್ರಭಾಕರನು ಬಾಯಾರಿ ಬಳಲಿ ನಡೆದು ಹೋಗುವನು**]

**ಪ್ರಭಾಕರ**—ಹಾ, ಸುಧಾ ನೀನೆಲ್ಲಿ ಹೋದೆ? ನೀನಿನ್ನೂ ನನ್ನನ್ನು ಕ್ಷಮಿಸದೆ ಹೋದೆಯಾ? ನನ್ನೊಡನೆ ಒಂದು ಮಾತಾದರೂ ಹೇಳಿ ಹೋಗಬಾರದಿತ್ತೇ? ಅಹ, ಈ ಘೋರಪಾಪಿಯ, ವಿಶ್ವಾಸ ಘಾತಕಿಯ, ಪ್ರೇಮವಿದ್ರೋಹಿಯ ಮುಖನೋಡಿದರೆನೇ ಮಹಾ ಪಾಪವೆಂದು ಕಣ್ಮರೆಯಾದೆಯಾ? ಆಗಲಿ, ಆಗಲಿ, ಸಾಧ್ಯವಾದರೆ ನಿನ್ನನ್ನು ಕಂಡು ಹಿಡಿದು ನಿನ್ನ ಪಾವನ ಪದತಲದಲ್ಲಿ ನನ್ನೀ ಪ್ರಾಣವನ್ನೊಪ್ಪಿಸುವೆನು. ಅದು ಅಸಾಧ್ಯವಾದರೆ ನಿನ್ನ ಹುಡುಕಾಟದಲ್ಲಿ ನನ್ನೀ ತುಚ್ಛ ಬಾಳನ್ನು ಕೊನೆಗೊಳಿಸುವೆನು. (**ತುಸು ಚಿಂತಿಸಿ ಅನಂತರ ಒಮ್ಮೆಯೇ ಉನ್ಮತ್ತನಂತೆ ಮೇಲೆ ನೋಡಿ**) ಪ್ರಿಯೆ, ಪ್ರಿಯೆ! ಬಾ, ಬಾ! ಅದೇಕೆ ಅಷ್ಟೊಂದು ದೂರದಲ್ಲಿ ನಿಂತುಕೊಂಡು ಕಣ್ಣೀರಿಡುವೆ? ಒಂದೊಮ್ಮೆ ನನ್ನನ್ನು ನಿನ್ನವನನ್ನಾಗಿಮಾಡಿ ನನ್ನ ಜನ್ಮ ಪಾವನಗೊಳಿಸು! ಅದೇಕೆ ಮಾತಾಡಲಾರೆ ಸುಧಾ! ಸುಧಾ!! ಸುಧಾ!!! ಸುಧಾ!!!!

ಅಹ! ಎಲ್ಲಿ, ನನ್ನ ಸುಧೆಯೆಲ್ಲಿ! ಆ ಪರಮಪಾವನೆಯೆಲ್ಲಿ! ನನ್ನ ಪ್ರಾಣನಾಯಕಿ ಎಲ್ಲಿ? ಒಂದುಕ್ಷಣದ ದರ್ಶನವಿತ್ತು ನನ್ನನ್ನು ನಡುನೀರಲ್ಲಿ ಕೈಬಿಟ್ಟು ಹೋಗಿಬಿಟ್ಟಳು! ಅಹ! ನನಗಿನ್ನೇನು ಗತಿ!

---

## ೨೨ನೇ ದೃಶ್ಯ—ಛತ್ರ

[ಅಮೃತರಾಯನು ಸಾಧುವೇಷ ಧರಿಸಿಕೊಂಡು ಊರೂರು ಅಲೆದಾಡುತ್ತಾ, ಪ್ರಭಾಕರರಾಯನನ್ನು ಕಂಡು ಸುಧೆಯ ಕುರಿತು ಸತ್ಯಸಂಗತಿಯನ್ನು ತಿಳಿಸಿ ಮುಕುಂದ ರಾಯನ ಕುತಂತ್ರವನ್ನು ಬಯಲುಪಡಿಸಬೇಕೆಂದು ಬಸ್ಸೂರಿಗೆ ಹೋಗುವನು.]

**ಅಮೃತ**—ರೂ. 500 ಸಿಕ್ಕುವುದು; ಅದರಿಂದ ನನ್ನೀ ಜೀವನವನ್ನೇ ಸುಖಮಯಗೊಳಿಸಬಹುದೆಂದು ಬಗೆದು ಮುಕುಂದರಾಯನ ಹಸ್ತಕನಾಗಿ ನಿಷ್ಕಳಂಕಿನಿ ಸುಧೆಯ ಸುಖವನ್ನೇ ಮಣ್ಣುಗೂಡಿಸಿದ ನನ್ನ ಕಲ್ಪನೆಯೆಲ್ಲಾ ಕನ್ನಡಿಯೊಳಗಿನಂತಾಯಿತು! ಆ ನೀಚ ಮುಕುಂದರಾಯನು, ತನ್ನ ಕೆಲಸ ವಾದ ಮೇಲೆ ನನ್ನನ್ನು ತಿರಸ್ಕರಿಸಿ ದೂರೀಕರಿಸಿರುವನು. ಮನೆಗೆ ಕಾಲಿಟ್ಟರೆ ಪೋಲೀಸರಿಗೆ ತಿಳಿಸಿ ದಸ್ತಗಿರಿ ಮಾಡಿಸುವ ಬೆದರಿಕೆ ಹಾಕಿರುವನು ಕೈಯಲ್ಲಿ ಹಣವಿಲ್ಲವೆಂದ ಮೇಲೆ ನಮ್ಮ ಹಣೆಬರಹವೇ ಮುಗಿಯಿತು. ರೂ. 500 ಸಿಗು ವುದೆಂದಿದ್ದಾಗ ನನ್ನನ್ನು ತಲೆಯ ಮೇಲೆ ಹೊತ್ತುಕೊಂಡು, ತನ್ನ ಮಗಳನ್ನು ನನಗೆ ವಿವಾಹಮಾಡಿ ಕೊಡುವೆನೆಂದಿದ್ದ ರಾಧಾಬಾಯಿಯು ನನ್ನೆದುರಲ್ಲಿಯೇ ಸರೋಜಿನಿಯನ್ನು ನನ್ನ ಬದ್ಧ ವೈರಿ ರಮೇಶನಿಗೆ ಮದುವೆ ಮಾಡಿಕೊಟ್ಟು ನನ್ನನ್ನು ಸಜೀವವಾಗಿ ಕೊಂದಳು. ಇದರಿಂದ ನನಗೆ ಮಂಗಳೂರಲ್ಲಿರುವುದೇ ಅಸಹನೀಯವಾಗಿ ನಾನು ಜೀವನದಲ್ಲೇ ವೈರಾಗ್ಯ ತಾಳಿ ಊರೂರು ಅಲೆದು ಬಿಕ್ಕೆ ಬೇಡಿ ತಿನ್ನುವ ಸನ್ಯಾಸಿಯಾಗಿರುವೆನು. ಇತರರಿಗೆ ಹಾನಿ ಬಗೆದು ತಾನು ಸುಖಪಡುವೆನೆಂಬುವನ ಪಾಡೇ ಇದು! ಅಹ! ಸುಧಾ! ಈಗ ನೀನೆಲ್ಲಿರುವೆ? ನಿನ್ನ ಜೀವನದ ಮೊಗ್ಗೆಯನ್ನೇ ಮುರಿದೊಗೆದಾ ಪಾಪಿ ನಾನು! ಪರಮ ಪಾವನೆಯಾದ ನಿನ್ನ ಕರುಣಾಪೂರ್ಣ ಕ್ಷಮೆಯ ಹೊರತು ಈ ದುರಾತ್ಮ ಜೀವಿಗೆ ಅನ್ಯಥಾ ಗತಿಯಿಲ್ಲ, ಶಾಂತಿಯಿಲ್ಲ. ಹ! ಹ! ಮುಕುಂದ ರಾಯ! ಮುಕುಂದ ರಾಯ! ನನ್ನಂತೆಯೇ ನಿನ್ನ ಕಲ್ಪನೆಯೂ ತಿರುಕನ ಸ್ವಪ್ನವಾಗಿರು ವುದು! ಏನು! ಏನು! ತನ್ನ ಮಗ ಹೈಕೋರ್ಟ ಜಡ್ಜನಾಗುವುದನ್ನು ಕಂಡು ಸಾಯಬೇಕೆಂದು ಮನಸಿನ ಮಂಡಿಗೆ ತಿನ್ನುತ್ತಿದ್ದೆಯಾ ಪಾಪಿ! ತಿನ್ನೀಗ, ಚೆನ್ನಾಗಿ ತಿನ್ನು! ನೀನು ಮಾಡಿದ್ದನ್ನು ಎರಡೂ ಕೈಗಳಲ್ಲಿ ತಿನ್ನು!

ಇಲ್ಲ, ಇಲ್ಲ! ಪ್ರಭಾಕರ ಸುಧೆಯರನ್ನಿನ್ನು ಕಾಣುವ ಸುದೈವವು ಈ ಪಾಪಿ ಗಿಲ್ಲ. ಅವರಿಬ್ಬರೂ ತಿಪ್ಪೆಪಾಲಾಗಿ ಹೊಟ್ಟೆ ಹೊರೆಕೊಂಡು ಕಡೆಗೆಲ್ಲಿಗಾದರೂ

ದಾರಿಯಲ್ಲಿ ಬಿದ್ದು ಸಾಯುವುದೇ ಈ ದುರಾತ್ಮನ ಗತಿ! ಆಗಲಿ, ಆ ಗತಿಯಾದರೂ ಬೇಗನೆ ಒದಗಿ ಈ ತುಚ್ಛ ಜೀವವು ಅಳಿದು ಹೋಗುವಂತಾಗಲಿ!

---

## ೨೩ನೇ ದೃಶ್ಯ—ಬೀದಿ

[ಮುಕುಂದರಾಯರು, ಪ್ರಭಾಕರನನ್ನು ಪತ್ತೆ ಹಚ್ಚಿಕೊಟ್ಟವರಿಗೆ ರೂ 1000 ಕೊಡುವೆನೆಂದು ಜಾಹೀರುಮಾಡಿ, ಆತನ ಛಾಯಾಚಿತ್ರ ಸಮೇತ ಮಾಡಿದ ಪ್ರಕಟಣೆಯಿರುವ ಬೊಂಬಾಯಿ ಕ್ರಾನಿಕಲ್ ಪತ್ರಿಕೆಯೊಂದನ್ನು ಬಳ್ಳಾರಿಯ ಪೋಲೀಸ್ ಸಬ್ ಇನ್ಸ್‌ಪೆಕ್ಟರನೊಬ್ಬನು ಹಿಡಿದುಕೊಂಡು ಪ್ರಭಾಕರನನ್ನು ಪತ್ತೆ ಹಚ್ಚುವುದರಲ್ಲಿ ನಿರತನಾಗುವನು.]

**ಪೋಲೀಸ್ ಇನ್ಸ್‌ಪೆಕ್ಟರ್**— ಒಂದೇ ಕಲ್ಲಿನಿಂದ ಎರಡು ಹಣ್ಣು ಉದುರಿಸುವ ಸುವರ್ಣ ಸಂದರ್ಭವಿದು. ಮುಕುಂದರಾಯರೆಂಬ ರಿಟಾಯರ್ಡ್ ಸಬ್ ಜಡ್ಜರೊಬ್ಬರಂತೆ. ಇವರ ಮಗ ಪ್ರಭಾಕರರಾಯರಂತೆ. ಬಳ್ಳಾರಿಯ ಡಿಸ್ಟ್ರಿಕ್ಟ್ ಜಡ್ಜರಾಗಿದ್ದರಂತೆ. ಅಬ್ಬಬ್ಬ! ಡಿಸ್ಟ್ರಿಕ್ಟ್ ಜಡ್ಜರೂ ಈ ಪಾಡಿಗೀಡಾಗುವುದೆಂದರೆ ಇದೊಂದು ವಿಚಿತ್ರವೇ ಸರಿ! ಅವರೀಗ ತನ್ನ ಹುದ್ದೆಗೇನೆ ರಾಜಿನಾಮೆಯಿತ್ತು ವೈರಾಗ್ಯತಳೆದು ಎಲ್ಲಿಗೋ ಹೋಗಿಬಿಟ್ಟಿರುವರಂತೆ. ಪ್ರಾಯಶಃ ಮನೆಯಲ್ಲಿ ಹೆಂಡ್ತಿ ಕಾಟ ಅವರಿಗೆ ಅಸಹನೀಯವಾಗಿರಬೇಕು. ಹೆಂಗಸಿನ ಪ್ರೇಮವೂ, ದ್ವೇಷವೂ ಎಂತಹ ವಿಲಕ್ಷಣ ಕಾರ್ಯಗಳನ್ನೆಲ್ಲಾ ಗಂಡಸಿನಿಂದ ಮಾಡಿಸುವವೆನ್ನಲಾಗುವುದಿಲ್ಲ! ಅದಂತಿರಲಿ, ನಾನೀಗ ಈ ಪ್ರಭಾಕರ ರಾಯರನ್ನೆಲ್ಲಿಯಾದರೂ ಪತ್ತೆ ಹಚ್ಚಿದರೆ ನನ್ನ ಭಾಗ್ಯೋದಯವೇ ಸರಿ. ಆ ಕೂಡ್ಲೆ ನನಗೆ ಮುಕುಂದರಾಯರು ಜಾಹೀರುಪಡಿಸಿರುವಂತೆ ರೂ. 1000 ಇನಾಮು ದೊರೆಯುವುದಲ್ಲದೆ, ಉದ್ಯೋಗದಲ್ಲಿಯೂ ಬಡ್ತಿ ದೊರೆಯದಿರದು. ಆದುದರಿಂದ ನಾನೀ ವಿಷಯದಲ್ಲಿ ನನ್ನಿಂದೆ ಸಾಧ್ಯವಾದ ಪ್ರಯತ್ನಮಾಡ್ಲೇಬೇಕು. ಪ್ರಭಾಕರ ರಾಯರು ಹುಬ್ಬಳ್ಳಿ ಮಾರ್ಗಹಿಡಿದು ಹೋಗಿರುವರಂತೆ. ಹುಬ್ಬಳ್ಳಿಯಲ್ಲಿಯೋ ಎಲ್ಲಿಯೋ ಇರಬೇಕು. ಇನ್ನೂ ಕೆಲದಿನ ಹುಡುಕಿ ನೋಡುವೆನು.

---

# ೨೪ನೇ ದೃಶ್ಯ—ಮನೆ

[ಸುಮಾರು ೧೦ ಘಂಟೆ ರಾತ್ರಿ ಸಮಯ. ಬಹಳ ಕೃಶನಾಗಿ ಹೋಗಿರುವ ಮುಕುಂದರಾಯನು ಕಾಸರಗೋಡಿನ ತನ್ನ ಮನೆಯ ಪೋರ್ಟಿಕೋದಲ್ಲಿ ಲೀಲಾವತಿಯು ಎಂದು ಬರುವಳೆಂದು ನಿರೀಕ್ಷಿಸುತ್ತಾ ಆರಾಮ ಕುರ್ಚಿಯಲ್ಲಿ ಕುಳಿತು ಬಹಳ ಚಿಂತಾ ಮಗ್ನನಾಗಿರುವನು ಸುಮಾರು ೧೧ ಘಂಟೆ ಸಮಯಕ್ಕೆ ಲೀಲಾವತಿಯು ಇನ್ನೊಬ್ಬ ವ್ಯಕ್ತಿಯೊಂದಿಗೆ ಜಟ್ಕದಲ್ಲಿ ಬರುವಳು ಮನೆಯಲ್ಲಿ ದೀಪ ಉರುವುದನ್ನು ಕಂಡು ಜಟ್ಕವು ತುಸು ದೂರದಲ್ಲಿಯೇ ನಿಲ್ಲಿಸಲ್ಪಡುವುದು ಲೀಲಾವತಿಯನ್ನು ಜಟ್ಕದೊಳಗಿದ್ದ ವ್ಯಕ್ತಿಯು ಕೈಹಿಡಿದು ಕೆಳಗಿಳಿಸಿ ಬೀಳ್ಕೊಟ್ಟು ಪುನಃ ಜಟ್ಕದಲ್ಲಿ ಕುಳಿತು ಹೋಗಿಬಿಡುವನು. ಲೀಲಾವತಿಯು ಮುಕುಂದರಾಯನ ಮನೆಯ ಅಂಗಳಕ್ಕೆ ಬರುವಾಗಲೇ ಪೋರ್ಟಿಕೊದಲ್ಲಿ ಉರಿಯುವ ಪೆಟ್ರೋಮೇಕ್ಸ್ ದೀಪದ ಪ್ರಕಾಶವನ್ನು ಸಹಿಸಲಾರದೆ ತುಸು ನಿಂತು ಕಡೆಗೆ ಕಣ್ಣಿಗೆ ಸೆರಗು ಮರೆಮಾಡಿಕೊಂಡು ಬಹಳ ಕಷ್ಟದಿಂದೆಂಬಂತೆ ಮನೆಯ ಮೆಟ್ಟಿಲು ಹತ್ತಿ ಮೇಲೆ ಬಂದು ಆರಾಮ ಕುರ್ಚಿಯೊಂದನ್ನು ಪೆಟ್ರೋಮೇಕ್ಸಿಗೆ ಹಿಮ್ಮುಖವಾಗಿ ತಿರುಗಿಸಿಟ್ಟು ಅದರ ಮೇಲೆ ಬಿದ್ದು ಬಿಡುವಳು.]

**ಲೀಲಾ**—ವಾಮನ! ವಾಮನ!! ವಾಮನ!!! ಎಲ್ಲಿ ಸತ್ತು ಹೋದೆ! (ಗಟ್ಟಿಯಾಗಿ ಕರೆಯುವಳು)

**ವಾಮನ**—(ಎಲ್ಲಿಯೋ ಒಂದೆಡೆ ಮಲಗಿದ್ದವನು ಕಣ್ಣೊರಸುತ್ತೊರಸುತ್ತ ಓಡಿ ಬಂದು) ಏನಮ್ಮಾ, ಏನು?

**ಲೀಲಾ**—ಈ ವರೆಗೆ ಎಲ್ಲಿ ಸತ್ತುಹೋಗಿದ್ದೆ ಘಟಿಂಗ? (ಒಮ್ಮೆಯೇ ಎದ್ದು ವಾಮನನ ಕಿವಿ ಚಿವುಟಿ ಪುನಃ ದೊಪ್ಪನೆ ಆರಾಮ ಕರ್ಚಿಗೆ ಬೀಳುವಳು.)

**ವಾಮನ**—(ಕೋಪವೇರಿ ಬಂದರೂ ತಡಕೊಂಡು ಸುಮ್ಮನಿರುವನು.)

**ಲೀಲಾ**—ಏಕೆ ಭೂತದಂತೆ ನಿಂತಿರುವೆ? ನನ್ನೆದೆ ಸುಡುತ್ತಿದೆ. ಕೂಡಲೆ ಒಂದು ಗ್ಲಾಸು ನೀರು ತಾ. (ವಾಮನನು ಹೋಗಿ ಒಂದು ಲೋಟೆ ಹೂಜಿಯ ನೀರು ತಂದು ಕೊಡುವನು. ಲೀಲಾವತಿಯು ಅದನ್ನು ಒಂದೇ ಸವನೆ ಕುಡಿದು ತೇಕುತ್ತಾ) ಇನ್ನೊಂದು ಲೋಟೆ ತಾ; ಬೇಗ ತಾ (ವಾಮನನು ಇಡೀ ಹೂಜಿಯನ್ನೇ ಹೊರ ತಂದು ಒಂದರ ನಂತರ ಒಂದಾಗಿ ೩ ಗಾಸ್ಸು ನೀರು ಹೊಯ್ದು ಕೊಡುವನು. ಲೀಲಾವತಿಯು ಅವನ್ನೆಲ್ಲಾ ಕುಡಿದು ಸೀರೆ ಸೆರಗನ್ನು ಕೆಳಗೆಸೆದು ಆರಾಮ ಕುರ್ಚಿಯಲ್ಲೊರಗಿ ಬಿಡುವಳು.)

**ಮುಕುಂದ**—(ಸಿಟ್ಟಿನಿಂದ ತಾನು ಕೂತಿದ್ದ ಆರಾಮ ಕುರ್ಚಿಯನ್ನು ಧರಧರನೆ ಲೀಲಾವತಿಯ ಸಮೀಪಕ್ಕೆಳೆದು ಕೂತು) ಲೀಲಾ ಇಷ್ಟು ರಾತ್ರಿ ಎಲ್ಲಿ ಹೋಗಿದ್ದೆ? ಘಂಟೆ ಹನ್ನೊಂದು ದಾಟಿತು!

**ಲೀಲಾ**—(ನಿರ್ಲಕ್ಷ್ಯವಾಗಿ) ನಾನು ಎಲ್ಲಿ ಹೋದರೆ ನಿಮಗೇನು?

**ಮುಕುಂದ**—(**ಸಿಟ್ಟಿನ ಭರದಿಂದ ಆರಾಮ ಕುರ್ಚಿಯಲ್ಲಿ ನೆಟ್ಟಗೆ ಕುಳಿತು**)ಏನು! ಎಲ್ಲಿ ಹೋದರೆ ನನಗೇನೇ? ನನ್ನ ಮನೆಯಲ್ಲಿರುವಾಗ ನಿನ್ನಿಚ್ಛಾನುಸಾರ ನಡೆಯಲು ನಾನು ಬಿಡಲಾರೆ.

**ಲೀಲಾ**—ಬಿಡದಿದ್ದರೇನುಮಾಡುವಿರಿ?

**ಮುಕುಂದ**—ಏನು ಮಾಡುವುದೇ? ಮನೆಯಿಂದ ಹೊರಹಾಕುವೆನು.

**ಲೀಲಾ**—ಹ—ಹ—ಹ—ಹ! (ಗೊಳ್ಳೆಂದು ನಕ್ಕು) ಯಾರ ಮನೆಯಿಂದ ಹೊರಹಾಕುವುದು? ಈ ಮನೆಯಲ್ಲಿ ನಿಮ್ಮಷ್ಟೇ ನನಗೂ ಹಕ್ಕಿರುವುದಿಲ್ಲವೇ? ನಿಮ್ಮ ಮಗನ ಹೆಂಡತಿಯಲ್ಲವೆ ನಾನು?

**ಮುಕುಂದ**—(ಗಡಗಡನೆ ನಡುಗುತ್ತಾ **ಆರಾಮ ಕುರ್ಚಿಗೆ ತಾಗಿ ಇಡಲ್ಪಟ್ಟಿದ್ದ ತೋರದ ನಾಗಬೆತ್ತವನ್ನು ತೆಗೆದು ಟಪ್ಪನೆ ನೆಲಕ್ಕೂರಿ ಜಗ್ಗನೆದ್ದು ಲೀಲಾವತಿಯ ಬಳಿಗೆ ಹೋಗಿ ಕ್ರೋಧಾತಿಶಯದಿಂದ**) ಏನು, ಏನಂದೆ? ನೀನು ನನ್ನ ಮಗನ ಹೆಂಡತಿಯೇ ದುರಾಚಾರಿಣಿ? ನಿನ್ನೊಂದಿಗೆ ಜಟ್ಕದಲ್ಲಿ ಬಂದವನಾರು? ಇಷ್ಟು ರಾತ್ರಿಯ ವರೆಗೆ ನೀನೆಲ್ಲಿ ಹೋದುದು? (**ಹೊಡೆಯ ಹೋಗುವವನಂತೆ ಮುಂದರಿಯುವನು.**)

**ಲೀಲಾ**—(**ಆರಾಮ ಕುರ್ಚಿಯಿಂದ ಛಕ್ಕನೆ ಎದ್ದು ಹತ್ತಿರದ ಮೇಜಿಗೆ ಒರಗಿ ನಿಂತು**) ಸಾಕು ಸಾಕು ನಿಮ್ಮ ದರ್ಪವೆಲ್ಲಾ! ನಿಮ್ಮ ಮಗನೊಡನೆ ನಡೆಯಿತೆಂದು ನನ್ನಲ್ಲಿ ನಡೆಯದದು! ನಾವು ಹೋದುದು ಬೇಕಲ್ ಕೋಟೆ ನೋಡಲಿಕ್ಕೆ

**ಮುಕುಂದ**—"ನಾವು" ಎಂದರೆ ಯಾರೆಲ್ಲಾ?

**ಲೀಲಾ**—ನಾನು ಮತ್ತು ನನ್ನ ಮಂಗಳೂರಿನ ಕೆಲವು ಮಿತ್ರರು.

**ಮುಕುಂದ**—ನೀವು ಯಾವ ಟ್ರೈನಿನಲ್ಲಿ ಹಿಂದೆ ಬಂದುದು?

**ಲೀಲಾ**—ಮಿಕ್ಸೆಡಿನಲ್ಲಿ.

**ಮುಕುಂದ**—ಹಾಗಾದರೆ ಮನೆಗೆ ಬರಲು ಇಷ್ಟು ತಡವೇನು?

**ಲೀಲಾ**—ಏನಿಲ್ಲ.

**ಮುಕುಂದ**—(**ಸ್ವಲ್ಪ ಮುಂದರಿದು**) ಏನಿಲ್ಲೆಂದರೆ ನಾನು ಕೇಳಲಾರೆ. ನನ್ನ ಸೊಸೆಯಾಗಿ ನನ್ನ ಮನೆಯಲ್ಲಿರುವನಕ ನಾನು ಹೇಳಿದಂತೆ ಕೇಳಬೇಕು ನೀನು.

**ಲೀಲಾ**—ಕೇಳದಿದ್ದರೇನಾಗುವುದು?

**ಮುಕುಂದ**—ಕೇಳದಿದ್ದರೇನಾಗುವುದೇ? ಭಿಕಾರಿಣಿ! ಕೇಳದಿದ್ದರೆ ಮನೆ

ಯಿಂದ ಹೊರಹೊರಡಬೇಕಾಗುವುದು.

**ಲೀಲಾ**—ಮನೆಯಿಂದ ಹೊರಡದಿದ್ದರೇನಾಗುವುದು?

**ಮುಕುಂದ**—ಹೊರಡದಿದ್ದರೆ ಕುತ್ತಿಗೆಗೆ ಕೈಹಾಕಿ ಹೊರದಬ್ಬಲಾಗುವುದು! ಹ್ಯಾಕೋರ್ಟು ಜಡ್ಜರ ಪುತ್ರಿಯೆಂಬ ಮದೋನ್ಮತ್ತತೆಯಿಂದ ನನ್ನ ಮೇಲೂ ಅಧಿಕಾರ ನಡೆಸಿ ನಿನ್ನಿಚ್ಛಾನುಸಾರ ವರ್ತಿಸುವೆಯೆಂದೆಣಿಸಿದೆಯಾ ನೀಚಳೆ? ಈಕ್ಷಣ ತೊಲಗಿಲ್ಲಿಂದ! ಹೋಗು, ನಿನ್ನ ಆ ಮಂಗಳೂರಿನ ಮಿತ್ರರೊಂದಿಗೆನೇ ಇರು! ಇಲ್ಲಿರಬೇಡ. (ದೂಡ ಹೋಗುವಾಗ ಲೀಲಾವತಿಯು ಬ್ರಾಂಡಿಕುಡಿದ ವಾಸನೆ ಬರುವುದು.) ನೀಚಳೆ! ಚೆನ್ನಾಗಿ ಕುಡಿದು ಕೂಡಾ ಬಂದಿರುವೆಯಲ್ಲ! ಸಾರ್ಥಕವಾಯಿತು ನಿನ್ನ ಜನ್ಮವಿಲ್ಲಿಗೆ! ಸರ್. ಯಶವಂತರಾಯರ ಸಾರ್ಥಕ ಪುತ್ರಿಯಾದೆ ನೀನು! ಸಾಕು, ನಿನ್ನಿಂದಾಗಿ ನನ್ನ ಮಗನಿಗಾದ ಗತಿ ಸಾಕು! ಅವನು ಪಟ್ಟ ಪಾಡೂ ಸಾಕು! ಅದರಿಂದಾಗಿ ನನ್ನ ಹೃದಯ ಬೇಯುವುದೂ ಸಾಕು! ನಿನ್ನ ಬೇಗೆ ಬೇಡ ಮತ್ತೆ! ಒಳ್ಳೇ ಮಾತಿನಿಂದ ನೀನೀಗಲೇ ಮನೆಬಿಟ್ಟು ಹೋದೆಯಾದರಾಯಿತು! ಇಲ್ಲವಾದರೆ ಜಾಗ್ರತೆ! (ಸಿಟ್ಟಿನ ಭರದಿಂದ ನಿಂತಲ್ಲಿ ನಿಲ್ಲದೆ ಒಂದೆರಡು ಸಲ ಒಳಗೆ ಹೊರಗೆ ಹೋಗಿ) ವಾಮನ! ವಾಮನ! ಈ ಗಯ್ಯಾಳಿಯ ಸಾಮಾನುಗಳನ್ನೆಲ್ಲಾ ಈಕ್ಷಣವೇ ಹೊರಹಾಕು! (ವಾಮನನು ಅಂಜುತ್ತಂಜುತ್ತ 'ಟ್ರಂಕು ಬೇಗು'ಗಳನ್ನೆಲ್ಲಾ ಒಂದೊಂದಾಗಿ ಹೊರ ತಂದಿಡಲಾರಂಭಿಸುವನು.)

**ಲೀಲಾ**—(ಸ್ವಲ್ಪ ಸೌಮ್ಯತೆಗಿಳಿದು) ಎಲ್ಲಿ ಹೋಗುವುದು ನಾನೀ ರಾತ್ರಿಗೆ?

**ಮುಕುಂದ**—ಎಲ್ಲಿಂದ ಬಂದಿರುವೆಯೋ ಅಲ್ಲಿಗೇನೇ ಹೋಗು! ನೀನೀವರೆಗೆ ಇದ್ದುದೆಲ್ಲಿ? ಕುಡಿದು ಮತ್ತಳಾದುದೆಲ್ಲಿ?

**ಲೀಲಾ**—ಮುಸಾಫರಿ ಬಂಗ್ಲೆಯಲ್ಲಿ.

**ಮುಕುಂದ**—ಅಲ್ಲಿಯೇ ಕುಡಿದುದೇ?

**ಲೀಲಾ**—ಹೌದು.

**ಮುಕುಂದ**—ನಿನ್ನ ಮಿತ್ರರೀಗ ಅಲ್ಲಿಯೇ ಇರುವರೇ?

**ಲೀಲಾ**—ಹೌದು.

**ಮುಕುಂದ**—ಎಷ್ಟು ಮಂದಿ ಇರುವರು?

**ಲೀಲಾ**—ಇಬ್ಬರಿರುವರು.

**ಮುಕುಂದ**—ಇಬ್ಬರಿರುವರೇ ವ್ಯಭಿಚಾರಿಣಿ? ಮಾನವಂತ ಸ್ತ್ರೀಯೆನಿಸಿ ಸಿಕ್ಕವರೊಡನೆಲ್ಲಾ ತಿರುಗಾಡಿ ಇಚ್ಛಾನುಸಾರ ನಡೆವ ನೀನು ಜಾಹೀರಾಗಿ ವ್ಯಭಿಚಾರ ಗೃಹವೊಂದನ್ನು ತೆರೆವರಾಗದೆ? ಅಹ! (**ಗದ್ಗದ ಕಂಠನಾಗಿ**) ನನ್ನ ಮುದ್ದು ಮಗನಾವ ಪಾಡಿಗೀಡಾಗಿರುವನೋ! ತಲೆ ತಿರುಕನಾಗಿ ಬೀದಿ ಬೀದಿ ಅಲೆದು ಎಲ್ಲಿ ಬಿಕ್ಕೆ ಬೇಡುತ್ತಿರುವನೋ! ಪ್ರಭಾ! ಪ್ರಭಾ! ಅಹ! ಎಲ್ಲಿರುವೆ! (**ದೊಪ್ಪನೆ ಕೆಳಗೆ ಬೀಳುವುದರಲ್ಲಿರುವಾಗ ವಾಮನನು ಓಡಿಬಂದು ಹಿಡಿದು ಆರಾಮ ಕುರ್ಚಿಯಲ್ಲಿ ಕೂತುಕೊಳ್ಳಿಸಿ, ಮುಖಕ್ಕೆ ನೀರು ಹಾಕಿ ಗಾಳಿ ಬೀಸುವನು. ಇಷ್ಟರಲ್ಲಿ ಲೀಲಾವತಿಯು ಒಳಗೆಹೋಗಿ ಮಂಚದಲ್ಲೊಂದೆಡೆ ಬಿದ್ದುಬಿಡುವಳು. ಮುಕುಂದನಿಗೆ ಪ್ರಜ್ಞೆ ಬರುವುದು**) ಪ್ರಭಾ! ಪ್ರಭಾ! ಅಹಹ!! ಬೇಡ ಬೇಡವೆಂದರೂ ಈ ಭಿಕಾರಿಣಿಯನ್ನು, ಕುಲಕಲಂಕಿನಿಯನ್ನು, ನೀಚಸ್ವೈರಿಣಿಯನ್ನು ನಿನ್ನ ಕುತ್ತಿಗೆಗೆ ಕಟ್ಟಿ ನಿನ್ನನ್ನು ಸಜೀವವಾಗಿ ಕೊಂದ ಪಾಪಿ ನಾನು! (**ತಲೆ ಬಡಕೊಂಡು**) ಮಹಾಪಾತಕಿ ನಾನು! ನಿರ್ದೋಷಿ, ನಿಷ್ಕಳಂಕಿನಿ ಸುಧೆಯು, ದುರಾಚಾರಿಣಿಯೆಂದು ಸಿದ್ಧಪಡಿಸುವ ಕುತಂತ್ರ ನಡೆಸಿದ ದುರಾತ್ಮ ನಾನು! ಆ ದುಷ್ಕರ್ಮ ಫಲವನ್ನೀಗ ಎರಡು ಕೈಗಳಿಂದಲೂ ತಿನ್ನುತ್ತಿರುವೆನು! ಹೂದೋಟದ ಸುಲಲಿತಸುಮವನ್ನು ಮುರಿದೆಸೆದು ತುಳಿದು, ಮಹತ್ತಾದ ಆಕಾಂಕ್ಷೆಯಿಂದ ಆಕಾಶ ಕುಸುಮವನ್ನು ಕೊಯ್ಯ ಹೋಗಿರುವ ಭ್ರಾಂತ ನಾನು! ಸಾಕು, ಈ ತುಚ್ಛ ಜೀವನವಿನ್ನು ಸಾಕು! ಅಹ! ಪ್ರಭಾ! ಪ್ರಭಾ!! ನಿನ್ನನ್ನೊಮ್ಮೆ ನೋಡುವ ಸುದೈವವು ಈ ಪಾಪಿಗೆ ದೊರೆತರೆ, ನನ್ನೀ ಹೃದಯದುರಿಯನ್ನು ಕೆಂಡಕೆಂಡವಾಗಿ ನಿನ್ನೆದಿರಲ್ಲಿ ಕಾರಿ ಕಾರಿ, ಈ ಕ್ಷುದ್ರಜೀವನದ ಅಂತ್ಯಸಂಸ್ಕಾರ ಮಾಡುತ್ತಿದ್ದೆನು. ಅಹಹ! (**ತಲೆಬಾಗಿ ಸಂತತಧಾರೆಯಾಗಿ ಕಣ್ಣೀರಿಳಿಸುವನು. ತುಸು ಸಮಯದಲ್ಲಿ ಫಕ್ಕನೆ ಎಚ್ಚತ್ತವನಂತಾಗಿ**) ವಾಮನ! ವಾಮನ!! ಆ ಭಿಕಾರಿಣಿಯೆಲ್ಲಿ? ಎಲ್ಲಿ ಹೋದಳವಳು? (**ವಾಮನನು ಮಾತಾಡದೆ ಸುಮ್ಮನಿರುವನು ಅವನ ಭುಜ ಹಿಡಿದು ಕುಲುಕಿ**) ಹೇಳು! ಆ ದುರಾಚಾರಿಣಿ ಎಲ್ಲಿ ಹೋದಳು?

**ವಾಮನ**—ಅವರು ಈ ರಾತ್ರಿಗೆ ಎಲ್ಲಿ ಹೋಗುವುದು ಪಾಪ!

**ಮುಕುಂದ**—ಏನು! ಅವಳು ಪಾಪವೇ? ನಿನಗಾ ಗಯ್ಯಾಳಿ ಕೊಟ್ಟ ಕಷ್ಟವಿನ್ನೂ ಸಾಲದೇ? ಎಲ್ಲಿ ಹೋದಳವಳು ಹೇಳು! ಬೇಗ ಹೇಳು!

**ವಾಮನ**—ಒಳಗೆ ಹೋಗಿ ಮಲಗಿರುವರು.

**ಮುಕುಂದ**—ಏನು! ಒಳಗೆ ಹೋಗಿ ಮಲಗಿರುವಳೇ! ಯಾರು ಹೇಳಿ ಒಳಗೆ ಹೋದುದವಳು! ಎಲ್ಲಿರುವಳು? (**ಕ್ರೋಧಾತಿಶಯದಿಂದ ಗಡಗುಟ್ಟಿ ನಡುಗುತ್ತ ಒಳ ಸಾರಿ, ಮಲಗಿದ್ದ ಲೀಲಾವತಿಯ ರಟ್ಟೆಹಿಡಿದು ಧರಧರನೆ ಹೊರಗೆಳತಂದು**) ಕಡು ನೀಚ ವೇಶ್ಯೆ ನೀನು! ವೇಶ್ಯೆಯರಾದರೆ ಮಾನದ ನೋಗಿಲ್ಲದೆ ಹೊಟ್ಟೆ ಪಾಡಿಗಾಗಿ ಪ್ರಾಮಾಣಿಕ ಜೀವನನಡಿಸುತ್ತಾರೆ. ಶ್ರೀಮಂತಳಾಗಿ ಮಾನ ವಂತಳೆನಿಸಿ ವ್ಯಭಿಚಾರ ನಡೆಸುವ ಅಧಮಾಧಮ ವೇಶ್ಯೆ ನೀನು! ನಡೆ, ತೊಲಗಿಲ್ಲಿಂದ! (**ಭರದಿಂದ ದೂಡಿಬಿಡುವನು. ಲೀಲಾವತಿಯು ನೆಲಕ್ಕೆ ಬೀಳುವಳು. ಅವಳ ಹಣೆಯೊಡೆದು ರಕ್ತ ಸುರಿಯುವುದು.**) ನಡೆ! ಈಕ್ಷಣ ನಡೆ (**ತುಳಿಯ ಹೋಗು ವಾಗ ವಾಮನನು ಓಡಿಬಂದು ತಡೆಯುವನು**)

**ವಾಮನ**—ರಾಯರೇ, ಅಮ್ಮನಿಗೆ ಪೆಟ್ಟಾಗಿದೆ! ನೋಡಿ ಇಟ್ಟಿಗೆಯೆಲ್ಲಾ ರಕ್ತದಿಂದ ತೋಯ್ದು ಹೋಗಿದೆ! ರಾಮ ರಾಮ! (**ಕೂಡಲೆ ತನ್ನ ಬೈರಾಸಿನಿಂದ ಲೀಲಾವತಿಯ ಹಣೆಯ ರಕ್ತವನ್ನೆಲ್ಲಾ ಒರಸುವನು.**)

**ಮುಕುಂದ**—ಅವಳಿಗೆ ಪೆಟ್ಟಾಗಲಿ, ನನ್ನ ಕಣ್ಣೆದಿರಲ್ಲಿಯೇ ನರಳಿನರಳಿ ಸಾಯಲಿ! ಇನ್ನು ನನ್ನ ಮನೆಯೊಳಗವಳು ಕಾಲಿಡಬಾರದು! (**ಡಬ್ಬನೆ ಮನೆ ಬಾಗಿಲು ಹಾಕಿ ಒಳಗೆ ಹೋಗಿ ಹಾಸಿಗೆಯ ಮೇಲೆ ಬಿದ್ದು ಆಕ್ರೋಶದಿಂದ ಅತ್ತಿತ್ತ ಹೊರಳಾಡುವನು. ವಾಮನನು ನೀರು ತಂದು ಲೀಲಾವತಿಯ ಹಣೆ ಮುಖವನ್ನೆಲ್ಲಾ ತೊಳೆದು ಎಷ್ಟು ಗಾಳಿ ಹಾಕಿದರೂ ಅವಳಿಗೆ ಬೋಧವೇ ಬಾರದಾಗುವುದು. ಆ ಮೇಲೆ ಮನೆಯ ಹಿಂಬದಿಯಿಂದ ಒಳಗೆ ಹೋಗಿ ಲೀಲಾವತಿಯ ಹಾಸಿಗೆ ತಂದು ನೆಲದಮೇಲೆ ಬಿಡಿಸಿ ಅವಳನ್ನು ಅದರ ಮೇಲೆ ಮಲಗಿಸಿ ಅವಳಿಗೆ ಯಾವಾಗ ಎಚ್ಚರವಾದೀತೆಂದು ನಿರೀಕ್ಷಿಸುತ್ತಾ ಹತ್ತಿರದಲ್ಲೇ ಕುಳಿತುಕೊಳ್ಳುವನು ಕಾಯುತ್ತಿದ್ದಂತೆಯೇ ಅವನಿಗೂ ಸಲ್ಪ ಸಮಯದ ಮೇಲೆ ಬಹಳ ತೂಕಡಿಕೆಯುಂಟಾಗಿ ನಿದ್ರಾಭರದಲ್ಲಿ ಅವನು ಎಲ್ಲ ವನ್ನೂ ಮರೆತು ತುಸು ದೂರವಿದುವ ಬೆಂಚಿಯಲ್ಲಿ ಮಲಗಿ ನಿದ್ದೆಹೋಗುವನು** )

---

## ೨೫ನೇ ದೃಶ್ಯ—ಬೀದಿ

[**ಪ್ರಭಾಕರನು ಜೀವನದಲ್ಲೇ ವೈರಾಗ್ಯತಳೆದು, ಹಸಿವು ತೃಷೆ, ಉಡುಗೆಯೇ ಮೊದಲಾದ ಯಾವವಿಷಯಕ್ಕೂ ಗಮನಕೊಡದೆ ಕೃಶನಾಗಿ ಹುಚ್ಚುಚ್ಚಿ ಪೇಟೆಯ ರಸ್ತೆಯಲ್ಲೊಂದೆಡೆ ಕುಳಿತು ಹುಚ್ಚನಂತೆ ಸುಧೆಯ ಕುರಿತು ಹಂಬಲಿಸುತ್ತಿರುವನು**]

**ಪ್ರಭಾಕರ**—ಸುಧಾ! ಸುಧಾ! ಸುಧಾ! ಆಹ! ಎಲ್ಲಿ ಸುಧೆಯಲ್ಲಿ! ಪಾಪಿ! ಪಾಪಿ! ನಾನು ಪಾಪಿ! ನನಗಾ ಪಾವನೆಯು ಸಿಗುವಳೆ? ಆಹ! ನನಗೆ ಸಾವಾದರೂ ಬಾರದೆ? ಅನ್ನ, ನೀರು, ನಿದ್ದೆ ಬಿಟ್ಟು ಈ ತುಚ್ಛದೇಹವನ್ನೆಷ್ಟು ಜೀರ್ಣಸಿಕೊಂಡರೂ ಪ್ರಾಣವು ಈ ಅಸ್ಥಿಪಂಜರವನ್ನೇ ಬಿಟ್ಟು ಹೋಗಲೊಲ್ಲದಲ್ಲ! ನಾನೇನು ಮಾಡಲಿ! ಸುಧೆಯನ್ನೆಲ್ಲಿ ಹುಡುಕಲಿ! ಇಲ್ಲ, ಆಶೆ ಇಲ್ಲ, ಸುಧೆಯಿನ್ನು ಸಿಗುವ ಆಶೆಯಿಲ್ಲ! ಈ ಜೀವವನ್ನಿಟ್ಟುಕೊಂಡಿನ್ನು ಫಲವಿಲ್ಲ! ಸಾವು, ಈಗ ಸಾವು ಬೇಕು ನನಗೆ! ಅದನ್ನು ಪಡೆಯುವ ಬಗೆಯಾವರೂ ಹೇಗೆ?

(ತುಸು ಆಲೋಚಿಸಿ ಫಕ್ಕನೆ ಉನ್ಮತ್ತನಂತೆ ಎದ್ದು ನಿಂತು) ಬೇಡ, ಬೇಡ ನನ್ನ ಸುಧೆ ಸಿಗುವಳು! ಬಂದಳು! ಅದೋ ನನ್ನ ಸುಧೆ ಬಂದಳು! ಕ್ಷಮಿಸು, ಸುಧಾ ಕ್ಷಮಿಸು! ಈ ಮಹಾಪಾತಕಿಯನ್ನುದ್ಧರಿಸು! ಸುಧಾ, ಅದೇಕೆ ಮೂರ್ತಿಯಂತೆ ನಿಂತಿರುವೆ! ನನ್ನನ್ನೊಮ್ಮೆ ಕಣ್ಣೆತ್ತಿಯಾದರೂ ನೋಡಲಾರೆಯಾ? ಅಂತಹ ಪಾತಕಿಯೆ ನಾನು? ನಿನ್ನ ಕೋಮಲ ಸ್ತ್ರೀಹೃದಯವು ಇಷ್ಟೊಂದು ಪಾಷಾಣ ವಾಗಿ ಹೋಗಿರುವುದೇ? ನನಗಿನ್ನು ಗತಿಯೇ ಇಲ್ಲವೇ? (ತುಸು ಮೌನವಾಗಿದ್ದು) ಆಹ! ಹೋದಳು, ನನ್ನ ಸುಧೆ ಹೋದಳು! ಹೋದಳು ಅಹ! (ದೊಪ್ಪನೆ ಬಿದ್ದು ಮೂರ್ಛಿತನಾಗುವನು. ರಸ್ತೆಯಲ್ಲಿ ಹೋಗುವ ಕೆಲವರು ಪ್ರಭಾಕರನನ್ನು ನೋಡಿ ಸತ್ತು ಬಿದ್ದ ಹೆಣವೆಂದು ಭಾವಿಸಿ ನೋಡಿದರೂ ನೋಡದಂತೆಯೆ ಹೋಗಿ ಬಿಡುವರು. ಮಾರ್ಕೆಟಿನಿಂದ ಕಾಯಿಪಲ್ಯ ತೆಗೆದುಕೊಂಡು ಮನೆಗೆ ಹೋಗುವ ಕೊರಗನು ಪ್ರಭಾ ಕರರಾಯನು ಬೋಧತಪ್ಪಿ ಬಿದ್ದಿರುವುದನ್ನು ಕಂಡು ಒಮ್ಮೆಯೇ ಉದ್ವೇಗಗೊಂಡು ಕೈಯಲ್ಲಿದ್ದ ಕಾಯಿಪಲ್ಯವನ್ನೆಲ್ಲಾ ಬಿಸುಟು)

**ಕೊರಗ**—ರಾಯರು! ರಾಯರು! ರಾಯರು ಸಿಕ್ಕಿದರು! ರಾಯರು ಸಿಕ್ಕಿದರು! (ಕೂಗುವನು)

**ದಾರಿಗ**—ಏನೋ ಹುಚ್ಚ! ಏನು ಕೂಗುತ್ತಿರುವೆ? ಯಾವ ರಾಯರು?

**ಕೊರಗ**—ಪ್ರಭಾಕರರಾಯರು! ಜಿಲ್ಲಾ ಜಡ್ಜರು! ನಮ್ಮ ಅಮ್ಮನವರ.....

**ದಾರಿಗ**—ಯಾವ ಜಿಲ್ಲಾ ಜಡ್ಜರು? ಯಾರು? ನಿನ್ನಮ್ಮನಾರು?

**ಕೊರಗ**—(ಪ್ರಭಾಕರರಾಯನನ್ನು ಕಂಡು) ಅಯ್ಯೋ! ರಾಯರಿಗೇನಾಗಿರುವುದು! ನಾನು ಅಮ್ಮನನ್ನು ಕರಕೊಂಡು ಬರುವೆನು. ಅಮ್ಮಾ! ಅಮ್ಮಾ! ರಾಯರು! ರಾಯರು!

**ದಾರಿಗ**—ಏನೊ ಹುಚ್ಚ! ಏನೆಂದು ಸರಿಯಾಗಿ ಹೇಳ ಬಾರದೆ? ಇದು ಯಾರ ಹೆಣ?

**ಕೊರಗ**—ಹೆಣ! ಯಾವುದು ಹೆಣ? ಅಲ್ಲ, ಅಲ್ಲ, ಹೆಣವಲ್ಲ! ರಾಯರು! ರಾಯರು! ನೀವು ಸುಳ್ಳು ಹೇಳುತ್ತಿರುವಿರಿ.

**ದಾರಿಗ**—ನೀನೇನು ಕುರುಡನೇ? ನೋಡಬಾರದೆ ನಾಡಿಯಿದೆಯೋ ಎಂದು?

**ಕೊರಗ**—(ಪ್ರಭಾಕರರಾಯನ ಕೈಹಿಡಿದು ನಾಡಿ ಪರೀಕ್ಷಿಸಿ) (**ಹೊಸಜೀವ ಬಂದವನಂತೆ ಥಟ್ಟನೆ ಎದ್ದು**) ಇದೇ, ನಾಡಿಯಿದೆ. ರಾಯರ ಪ್ರಾಣಹೋಗಿಲ್ಲ. ನೀರು! ನೀರು! ಸ್ವಾಮಿ, ದಯವಾಡಿ ಎಲ್ಲಿಂದಾದರೂ ಸ್ವಲ್ಪ ನೀರು ತನ್ನಿರಿ. ಬೇಗ ತನ್ನಿ. ಇಲ್ಲ, ರಾಯರು ಸಾಯಲಿಲ್ಲ.

ದಾರಿಗ—(**ಪ್ರಭಾಕರರಾಯನ ನಾಡಿ ಪರೀಕ್ಷಿಸಿ ಜೀವವಿರುವದೆಂದು ತಿಳಿದು ಓಡಿಹೋಗಿ ಹತ್ತಿರದ ಕಾಫಿ ಹೊಟೆಲಿಂದ ನೀರು ತಂದು ಪ್ರಭಾಕರರಾಯನ ಹಣೆ ಮತ್ತು ಮುಖಕ್ಕೆ ಹಾಕಿ ಗಾಳಿ ಹಾಕುವನು. ಸುಮಾರು ಹೊತ್ತಿನವರೆಗೆ ಪ್ರಭಾಕರನಿಗೆ ಜ್ಞಾಪಕವೇ ಬಾರದಿರುವದು**)

**ಕೊರಗ**—ಅಯ್ಯೋ! ರಾಯರೆ! ಅಮ್ಮ ಇಲ್ಲಿಯೇ ಇರುವರು. ಮಗುವೂ ಇರುವುದು. ರಾಯರೆ! ರಾಯರೆ!(**ನಿದ್ದೆ ಬಂದವನನ್ನೆಬ್ಬಿಸುವಂತೆ ಮೈಕುಲುಕುವನು**)

**ದಾರಿಗ**—ಎಲೋ ಮಂಕು! ಯಾಕೆ ಮೈ ಕುಲುಕುವೆ! ಅವರನ್ನೀಗಲೆ ಆಸ್ಪತ್ರೆಗೊಯ್ಯಬೇಕು. ಪೆಟ್ಟು ಗಟ್ಟಿಯಾಗಿರುವುದೋ ಏನೋ? ನಾನು ಗಾಡಿ ತರುವೆನು.

**ಕೊರಗ**—ಬೇಡ ಬೇಡ, ಆಸ್ಪತ್ರೆಗೆ ಬೇಡ! ಅಮ್ಮನ ಬಳಿಗೊಯ್ಯಬೇಕು. ಈಕ್ಷಣ ಒಯ್ಯಬೇಕು. ತನ್ನಿರಿ, ಗಾಡಿ ತನ್ನಿರಿ. ದುಡ್ಡು ನಾನು ಕೊಡುವೆನು. (**ವಸ್ತ್ರದ ಗಂಟು ಬಿಚ್ಚಿ ತನ್ನಲ್ಲಿದ್ದ ದುಡ್ಡನ್ನೆಲ್ಲಾ ಕೊಡುವನು.**)

**ದಾರಿಗ**—ಇದೇಕಿಷ್ಟು ದುಡ್ಡು? ನಾಲ್ಕಾಣೆ ಸಾಕು. ನಿಮ್ಮ ಮನೆ ಹತ್ತಿರವೇ ಇದೆಯಲ್ಲವೇ?

**ಕೊರಗ**—ಹೌದು, ಹತ್ತಿರವೇ ಇದೆ. ಅಮ್ಮ ಅಲ್ಲಿಯೇ ಇದ್ದಾರೆ. ಮಗುವೂ ಇದೆ. ಬೇಗ ಜಟ್ಕ ತನ್ನಿರಿ. (**ದಾರಿಗನು ಧಾವಿಸುವನು**) ದೇವರೆ, ದೇವರೆ! ಕರುಣಿಸು! ರಾಯರೊಮ್ಮೆ ಬದುಕುವಂತೆ ಮಾಡು! (**ಕಣ್ಣೀರಿಡುವನು**)

---

## ೨೬ನೇ ದೃಶ್ಯ—ಮನೆ

[ಸುಧೆಯ ಮನೆಯ ಜಗಲಿ. ಪ್ರಭಾಕರನಿಗೆ ಬೋಧ ಬಂದಿರುವುದು.]

**ಪ್ರಭಾಕರ**—ಸುಧಾ! ಸುಧಾ! (ವಿಕಾರವಾಗಿ ಕೂಗಿ ಓಡಿಬಂದು ಸುಧೆಯ ಕಾಲಿಗೆ ಬಿದ್ದು) ಕ್ಷಮಿಸು ಸುಧಾ! ಈ ಪಾಪಿಯನ್ನೊಮ್ಮೆ ಕ್ಷಮಿಸು! (ಸುಧೆಯ ಕಂಗಳಲ್ಲಿ ಒಂದೇ ಸವನೆ ಕಣ್ಣೀರಿಳಿದು ಬರುವುದು ಅವಳು ಉದ್ವೇಗದಿಂದ ರುದ್ಧ ಕಂಠಳಾಗಿ ಮತ್ತೂ ಸುಮ್ಮನೆ ನಿಲ್ಲುವಳು.)

**ಕೊರಗ**—ಅವಳು ಕ್ಷಮಿಸುವಳು; ನೀವವಳ ಪಾದ ಬಿಡಿರಿ.

**ಪ್ರಭಾಕರ:**—ಅವಳು ಕ್ಷಮಿಸುವಳೆಂದು ನೀವು ಹೇಳಿದರೆ ಸಾಲದಣ್ಣ! ಈ ಮೊದಲೊಮ್ಮೆ ನಾನು ಕ್ಷಮೆಯಾಚಿಸಿದಾಗ ನಿರಾಕರಿಸಿ, ಪಾತಕಿಯಾದ ನನ್ನನ್ನು ನನ್ನ ಪಾಡಿಗೆ ಬಿಟ್ಟು ಬಂದಿರುವಳು. ಇಂದು ಕೂಡಾ ಅವಳು ನನ್ನನ್ನು ಕ್ಷಮಿಸದಿದ್ದರೆ ನನಗಿನ್ನು ಮುಂದೆ ಈ ಜೀವನವೇ ಬೇಕಾಗಿಲ್ಲ. (ಸುಧೆಯ ಕಡೆಗೆ ಮುಖವೆತ್ತಿ) ಕ್ಷಮಿಸುವೆಯೋ ಹೇಳು ಸುಧಾ?

**ಸುಧಾ**—(ಕಣ್ಣೀರೊರಸಿ) ನಾನಿನ್ನು ಕ್ಷಮಿಸಿದರೇನು? ಕ್ಷಮಿಸದಿದ್ದರೇನು?

**ಪ್ರಭಾಕರ**—ಯಾಕೆ ಹಾಗನ್ನುವೆ ಸುಧಾ? ಕ್ಷಮಿಸಿದರೆ ನೀನೆನಗೆ ಪ್ರಾಣ ದಾನವಿತ್ತಂತಾಗುವುದು; ನವಜೀವನಾಮೃತಪಾನಮಾಡಿಸಿದಂತಾಗುವುದು; ಉರಿದು ಹೋಗಿರುವ ಜೀವನವೃಕ್ಷವನ್ನು ಕರುಣಾರಸದಿಂದ ಚಿಗುರಿಸಿದಂತಾ ಗುವುದು.

**ಕೊರಗ**—(ಸುಧೆಯು ಮತ್ತೂ ಮತ್ತೂ ಮೌನತಾಳದಿರುವುದನ್ನು ಕಂಡು ತಾಳ ಲಾರದೆ) ಅಮ್ಮಾ! ನಿಮ್ಮ ಹೃದಯವು ಇಷ್ಟೊಂದು ಕಠಿಣವಾಗಿರುವುದೇ? ಅವರು ಇಷ್ಟೊಂದು ಪಶ್ಚಾತ್ತಾಪದಿಂದ ಕ್ಷಮೆಯಾಚಿಸುವಾಗ ನಿಮಗೀಗ ಒಮ್ಮೆ ಕ್ಷಮಿಸುವೆನೆಂದು ಹೇಳಲಾಗುವುದಿಲ್ಲವೇ?

**ಸುಧಾ**—(ಒಂದೇ ಸವನೆ ಕಣ್ಣೀರು ಸುರಿಸಿ ಕ್ಷೀಣ ಸ್ವರದಿಂದ) ಕ್ಷಮಿಸುವೆನು. (ಆವೇಗಭರದಿಂದ ಪ್ರಭಾಕರರಾಯನ ತೋಳು ಹಿಡಿದೆತ್ತಲೆತ್ನಿಸಿದಾಗ ಹಿಂದೆ ಬಿದ್ದು ಪ್ರಜ್ಞೆ ತಪ್ಪಿ ಹೋಗುವುದು.)

**ಪ್ರಭಾಕರ**—ಪ್ರಿಯೇ, ಏನಾಯಿತು! ಏನಾಯಿತು! ಈ ಘೋರಪಾತಕಿಯ ಸ್ಪರ್ಶವೇ ನಿನಗೆ ಅಸಹನೀಯವಾಯಿತೆ? ಸುಧಾ! ಸುಧಾ!! (ಸುಧೆಯನ್ನೆತ್ತಿ ಹಿಡಿದು ಗಾಳಿಹಾಕುವನು. ಕೊರಗನು ದಿಗಿಲುಗೊಂಡು ನೀರುತಂದು ಮುಖ ಒರಸುವನು)

**ಸುಧಾ**-ಕ್ಷಮಿಸುವೆನು, ಕ್ಷಮಿಸುವೆನು. ಎಲ್ಲಿ? ಅವರೆಲ್ಲಿ? (**ಥಟ್ಟನೆದ್ದು ನಿಲ್ಲುವಳು**)

**ಪ್ರಭಾಕರ**—ಪ್ರಿಯೆ, ಗಾಬರಿಬೇಡ. ನಾನಿನ್ನೆಲ್ಲಿ ಹೋಗಲಿ ನಿನ್ನನ್ನು ಬಿಟ್ಟು?

**ಸುಧಾ**—ಪ್ರಿಯಕರ, ನಿಮಗೆ ನಾನು ಬಹಳ ಕಷ್ಟವಿತ್ತೆನು. ನನಗಾಗಿ ನೀವು ಅಸಹನೀಯ ಯಾತನೆಗೊಳಗಾದಿರಿ.

**ಪ್ರಭಾಕರ**—ಸಾಕು ಸುಧಾ ಸಾಕು! ನಿನ್ನ ಕಷ್ಟದಿದಿರಲ್ಲಿ ನನ್ನದೆಂತಹದು? ನಿನಗೆ ನಾನು ಮಾಡಿದ ಅಪರಾಧಕ್ಕಾಗಿ ನನಗೀಲೋಕದಲ್ಲಿ ಯಾವ ಕಷ್ಟ ತಾನೆ ಹೆಚ್ಚಿನದು?

**ಕೊರಗ**—ನೀವಿಬ್ಬರೂ ಆಸಹನೀಯ ಕಷ್ಟಕ್ಕೀಡಾಗಿರುವಿರೆಂಬುದೇನೋ ನಿಜ. ಆದರೆ ಕಟ್ಟಕಡೆಗೆ ವಿಚಿತ್ರವಾಗಿ ಒಟ್ಟುಗೂಡುವಂತಾದುದು ಎಂತಹ ಕಷ್ಟವನ್ನಾದರೂ ಒಂದೊಮ್ಮೆ ಮರೆಸಿಬಿಡುವ ಆನಂದೋತ್ಸಾಹದ ಸಂಗತಿ ಯಲ್ಲವೇ? ಅಮ್ಮಾ, ರಾಯರು ಅನ್ನ ನೀರು ತೆಗೆದುಕೊಳ್ಳದೆ ಎಷ್ಟು ದಿನ ವಾಯಿತೋ? ನಾನು ಕಾಫಿ ತರುವೆನಮ್ಮಾ ಅವರಿಗೆ. (**ಹೋಗುವನು**)

**ಪ್ರಭಾಕರ**—ನನಗಿನ್ನು ಬೇರೆ ಅನ್ನನೀರು ಬೇಕೇ? ನನ್ನ ಜೀವನಾಮೃತವೇ ದೊರಕಿರುವುದಲ್ಲವೇ?

**ಸುಧಾ**—ಹೌದು ಜೀವನಾಮೃತ! ಸಕಾಲದಲ್ಲಿ ಅಪ್ಪನು ನಿಮ್ಮನ್ನು ಕಂಡು ಉಪಚರಿಸದಿರುತ್ತಿದ್ದರೆ ಏನಾಗುತ್ತಿತ್ತೋ? ಆಗ ಒಂದಲ್ಲ, ಎರಡು ಜೀವಗಳು....

**ಪ್ರಭಾಕರ**—ಸುಧಾ! ಕೊರಗನು ನಮ್ಮ ಪಾಲಿನ ದೈವ. ಅವನಲ್ಲದಿರು ತ್ತಿದ್ದರೆ........

**ಸುಧಾ**—ಯಾರು! ಕೊರಗ? ನೀವಿನ್ನವರನ್ನು ಹಾಗೆ ಕರೆಯಬಾರದು. ಅವರು ನನ್ನ ಅಪ್ಪ; ನಿಮ್ಮ ಮಾವ.

**ಪ್ರಭಾಕರ**—ಕ್ಷಮಿಸು ಸುಧಾ! ತಪ್ಪಾಯಿತು. ಮಾವನಲ್ಲ, ಮಹದೇವ ನೆಂದರೂ ಸಲ್ಲುವುದು ಸುಧಾ.

**ಸುಧಾ**—ನನ್ನ ಜೀವನದ ಬೆಳಕು, ಪ್ರಾಣದ ಪ್ರಾಣ, ದೇವರ ದೇವರವರು. ಅವರಲ್ಲದಿರುತ್ತಿದ್ದರೆ ನನ್ನ ಗತಿಯೇನಾಗುತ್ತಿತ್ತೊ? ಅದೋ ಅವರು ಬಂದೇ ಬಂದರು. ನೀವು ಕೈಕಾಲು ತೊಳೆಯಿರಿ ಬನ್ನಿರಿ. (**ಇಬ್ಬರೂ ಒಳಗೆ ಹೋಗುವರು.**)

---

# ೨೭ನೇ ದೃಶ್ಯ—ಉದ್ಯಾನ

[ಸರ್ ಯಶವಂತ ರಾಯರು, ಲೀಲಾವತಿ ಮತ್ತು ಡಾಕ್ಟರ್ ರಮಾನಾಥನರನ್ನು ನಿರೀಕ್ಷಿಸುತ್ತಾ ತನ್ನ ಮನೆಯ ಹೂತೋಟದ ಆಸನದಲ್ಲೊರಗಿ ಚುಟ್ಟಾ ಎಳೆಯುತ್ತಿರುವರು ತಾಸು ಸಮಯದ ಮೇಲೆ ರಿಸ್ಟ್‌ವಾಚು ನೋಡಿ]

**ಯಶವಂತರಾವ್**—ಘಂಟೆ 11 ಆಯಿತು. ಎಲ್ಲಿ ಹೋದರಿವರು? ಮಧ್ಯ ರಾತ್ರಿಯ ವರೆಗೂ ಸಿಕ್ಕಿದಲ್ಲೆಲ್ಲಾ ಅಡ್ಡಾಡುವುದೆಂದರೆ ಇದಕ್ಕೇನರ್ಥ! ಇಲ್ಲ, ನನ್ನ ಮಗಳಿಂದಾಗಿ ನಾನು ಮುಖವೆತ್ತಿಕೊಂಡು ಹೊರ ಹೋಗಲಿಕ್ಕಿಲ್ಲ! ಒಬ್ಬಳೇ ಮಗಳೆಂದು ಯಾವ ತರದ ಅಂಕೆಯೂ ಇಲ್ಲದೆ ಸ್ವೇಚ್ಛಾನುಸಾರವಾಗಿ ನಡೆಯಬಿಟ್ಟುದು ನನ್ನ ತಪ್ಪು! ಈಗ ಬೆಳೆದು ಹೋಗಿದೆ ಅದು. ಯಾವ ಹಿಡಿತಕ್ಕೂ ಬರುವಹಾಗಿಲ್ಲ. ಇಡೀ ಪಟ್ಟಣದಲ್ಲೇ ಹಬ್ಬಿದೆ ನನ್ನ ಮಗಳ ಸುದ್ದಿ. ನಾನೆಷ್ಟು ಹೇಳಿದರೂ ಅವಳು ಕೇಳುವಂತಿಲ್ಲ. ನಗೆನಾಚಿಕೆ, ಮಾನ ಮರ್ಯಾದೆಯಿಲ್ಲದ ಭಿಕಾರಿಣಿಯಾಗಿದ್ದಾಳವಳು. ಮನೆಯಲ್ಲೊಂದು ಘಳಿಗೆ ಯಿರಲಿಕ್ಕಿಲ್ಲ. ಕುಡಿಯುವುದಕ್ಕೊಂದು ಮಿತವೆಂದಿಲ್ಲ, ಕಾಲವೆಂದಿಲ್ಲ. ಮಾಡುವುದೇನು? ಆ ಪ್ರಭಾಕರನ ಗತಿಯೇನಾಗಿರುವುದೋ? ಅವನೆಲ್ಲಿರುವನೋ? ಸಾಧ್ಯವಿಲ್ಲ; ಇಂತಹ ಸ್ವೈರಿಣಿಯನ್ನು ಆಳಲು ಯಾರಿಂದಲೂ ಸಾಧ್ಯವಿಲ್ಲ. ಪ್ರಭಾಕರನೇನು ಮಾಡ್ಯಾನು ಮತ್ತೆ—ಪಾಪ!

(ಡಾಕ್ಟರ್ ರಮಾನಾಥನನೂ ಲೀಲಾವತಿಯೂ ಕೈಕೈ ಹಿಡಿದುಕೊಂಡು ಪ್ರವೇಶಿಸುವರು.)

**ಲೀಲಾ**—ಅಪ್ಪಾ, ಇಲ್ಲೇನು ಮಾಡುತ್ತಿರುವುದು? ನಮಗೆ ಬರಲು ಸ್ವಲ್ಪ ಹೊತ್ತಾದುದಕ್ಕಾಗಿ ಕ್ಷಮಿಸಿರಿ. ಮನೆಗೆ ಹೋಗುವ, ಎಲ್ಲಿಯಾದರೂ ಶೀತವಾದೀತು ಹನಿ ಬಿದ್ದು.

**ಯಶವಂತರಾವ್**—ಹನಿ ಬೀಳಲಿ! ಆಕಾಶವೇ ಕಳಚಿ ಬೀಳಲಿ! ನಾನು ಇಂದೇ ಸತ್ತಿದ್ದರೆ ಚೆನ್ನಾಗುತ್ತಿತ್ತು!

**ಲೀಲಾ**—ಏನು! ಏನಾಯಿತು ಅಪ್ಪಾ? (ಮೈ ಹಿಡಿಯಹೋಗುವಳು)

**ಯಶವಂತರಾವ್**—ನನಗೇನೂ ಆಗಲಿಲ್ಲ! ನೀನು ನನ್ನ ಮೈಮುಟ್ಟುವುದು ಬೇಡ. (ತಿಗೆದು ದೂಡುವನು. ಲೀಲಾವತಿಯು ಕ್ರುದ್ಧಳಾಗಿ ಯಶವಂತರಾಯನನ್ನು ದಿಟ್ಟಿಸಿನೋಡಿ ಒಳಗೆ ಹೋಗಿಬಿಡುವಳು.)

**ರಮಾನಾಥನ್**—ಯಶವಂತರಾಯರೇ, ಇಂದೇನಾಯಿತು ನಿಮಗೆ?

**ಯಶವಂತರಾವ್**—ಇಂದೇನಾಯಿತೇ? ಡಾಕ್ಟರ್ ರಮಾನಾಥನ್, ಸಾಕು! ನೀವು ನಮ್ಮ 'ಫೆಮಿಲಿ' ಡಾಕ್ಟರ್ ಆಗಹೋಗಿ ಮಾಡಿದ ಉಪಕಾರ ಸಾಕು!

**ರಮಾನಾಥನ್**—ನಾನೇನು ಮಾಡಿದೆ?

**ಯಶವಂತರಾವ್**—ನಾನೇನು ಮಾಡಿದೆ? ನೀವೇನೂ ಮಾಡಿಲ್ಲವೇ? ನೀವು ಇಷ್ಟರವರೆಗೆ ಎಲ್ಲಿ ಹೋದುದು? ಎಷ್ಟು ರಾತ್ರಿಯಾಯಿತೆಂದು ಬಲ್ಲಿರಾ?

**ರಮಾನಾಥನ್**—ನಾವು ನಿಮ್ಮನ್ನು ಹುಡುಕಿಕೊಂಡು ಹೊಟೆಲ್ 'ಬೊಸೊಟ್ಟೋ'ಗೆ ಹೋದುದು. ಅಲ್ಲಿಂದ ನೆಟ್ಟಗೆ ಇಲ್ಲಿ ಬಂದುದು.

**ಯಶವಂತರಾವ್**—ಅಲ್ಲಿಂದ ನೆಟ್ಟಗೆ ಇಲ್ಲಿ ಬಂದುವೇ? ನಿಮಗೆ ನಾಚಿಕೆಯಾಗುವುದಿಲ್ಲವೇ ಹಸಿ ಹಸಿ ಸುಳ್ಳು ಹೇಳಲಿಕ್ಕೆ? ನೀವಲ್ಲಿ ಕುಡಿದು ನರ್ತಿಸಿ ಬಂದುದಲ್ಲವೇ? ಡಾಕ್ಟರ್ ರಮಾನಾಥನ್, ಇಷ್ಟರವರೆಗೆ ನನಗೆ ಬಂದ ಅಪಕೀರ್ತಿ ಸಾಕು! ಇನ್ನುಮುಂದೆ ನೀವು ಲೀಲಾವತಿಯನ್ನು ಮದುವೆಯಾಗಬೇಕು. ಅದರಿಂದೇನೇ ಆಗಲಿ, ಅದೆಲ್ಲಕ್ಕೂ ನಾನು ತಲೆಕೊಡುವೆನು.

**ರಮಾನಾಥನ್**—ಮದುವೆಯಾಗುವುದು! ಹ! ಹ! ಹ! ಇದೇನನ್ನುವಿರಿ ಯಶವಂತರಾಯರೇ? ಯಾರು ಯಾರನ್ನು ಮದುವೆಯಾಗುವುದು?

**ಯಶವಂತರಾವ್**—ಅದೇ ಅನ್ನುವುದು! ನೀವು ಲೀಲಾವತಿಯನ್ನು ಮದುವೆಯಾಗುವುದು.

**ರಮಾನಾಥನ್**—ನನಗೊಂದು ಮದುವೆಯಾಗಿ 4 ಮಕ್ಕಳು ಕೂಡಾ ಇರುವವಲ್ಲ? ನಾನಿನ್ನೊಂದು ಮದುವೆಯಾಗುವುದಾದರೂ ಹೇಗೆ?

**ಯಶವಂತರಾವ್**—ಅದನ್ನು ನೀವು ಈ ಮೊದಲೇ ಯೋಚಿಸಿಕೊಳ್ಳಬೇಕಿತ್ತು. ನೀವು ನನ್ನ ಮಗಳೊಂದಿಗೆ ಇಚ್ಛಾನುಸಾರವಿರಲು ಅವಳೇನು ಮಾನಗೆಟ್ಟವಳೇ? ನಾಳೆಯೊಳಗೆ ನೀವು ಮದುವೆಯಾಗಲೇ ಬೇಕು ಇಲ್ಲವಾದರೆ ನನಗೆ ತೋರಿದ್ದನ್ನು ಮಾಡುವೆನು.

**ರಮಾನಾಥನ್**—ಇದೇನನ್ನುವಿರಿ ಯಶವಂತರಾಯರೇ? ಕ್ಷಮಿಸಿರಿ. ಸ್ವಲ್ಪ ವಿಚಾರಿಸಿರಿ. ನನ್ನ ಜಾತಿಯಾವುದು? ನಿಮ್ಮ ಜಾತಿಯಾವುದು? ಅದು ಹೊರತು ಲೀಲಾವತಿಗೂ ಪ್ರಭಾಕರ ರಾಯರಿಗೂ ವಿವಾಹವಿಚ್ಛೇದವಾಗಿರುವುದೇ?

**ಯಶವಂತರಾವ್**—ನೀವು ಲೀಲಾವತಿಯೊಂದಿಗೆ ಸಿಕ್ಕಿದಲ್ಲೆಲ್ಲಾ ತಿರುಗಾಡಿ ಇಚ್ಛಾನುಸಾರ ನಡೆಯಲು ಜಾತಿಯು ತಡೆಯಿಲ್ಲವೇ? ಅದಕ್ಕೆ ಪ್ರಭಾಕರನೊಂದಿಗಾದ ವಿವಾಹವಿಚ್ಛೇದವಾಗುವುದು ಬೇಡವೇ? ವಿಚಾರಿಸಿರುವೆನು; ಹೈಕೋರ್ಟಿನ ಜಡ್ಜನಾದ ನನಗೆ ನೀವು ಹೇಳಬೇಕಾಗಿಲ್ಲ. ನಾನೆಲ್ಲವನ್ನೂ ಚೆನ್ನಾಗಿ ವಿಚಾರಿಸಿಯೇ ಇರುವೆನು. ವಿಚಾರಹೀನ ಪಶುಗಳು ನೀವು. ನಿಮ್ಮಲ್ಲಿ ಒಂದಿಷ್ಟು ವಿಚಾರವಿದ್ದಿದ್ದರೆ ನೀವೀ ರೀತಿ ವರ್ತಿಸುತ್ತಿದ್ದಿರೇ?

**ರಮಾನಾಥನ್**—ಸಾಧ್ಯವಿಲ್ಲ, ನನಗೆಂದಿಗೂ ಲೀಲಾವತಿಯನ್ನು ವಿವಾಹವಾಗಲು ಸಾಧ್ಯವಿಲ್ಲ. ನಾನೇನೂ ಮಾಡಿಲ್ಲ. ಅವಳೇ ...

**ಯಶವಂತರಾವ್**—ಮುಚ್ಚುಬಾಯಿ ನೀಚಾ! ಏನು! ನೀನೇನೂ ಮಾಡಿಲ್ಲವೇ ದುರಾತ್ಮ? ನೀನು ನನ್ನ ಫೆಮಿಲಿ ಡಾಕ್ಟರನಾದುದು ನನ್ನ ಮಗಳನ್ನು ಕೆಡಿಸಲಿಕ್ಕೆಂದೇ? ನನ್ನನ್ನು ಸಜೀವವಾಗಿ ಕೊಲ್ಲಲಿಕ್ಕೆಂದೇ?

**ರಮಾನಾಥನ್**—ನಾನೇನು ಮಾಡಲಿ? ಅವಳೇ ಒತ್ತಾಯಮಾಡುವಾಗ....

**ಯಶವಂತರಾವ್**—ನಾಚಿಕೆಯಾದರೂ ಆಗುವುದಿಲ್ಲವೆ ನಿನಗೆ ದ್ರೋಹಿ! ಏನು! ಅವಳು ಒತ್ತಾಯಮಾಡಿದಳೇ? ಇನ್ನೊಬ್ಬನು ಒತ್ತಾಯಮಾಡಿದನೆಂದು ನಿನ್ನ ಹೆಂಡತಿಯು ಅವನೊಂದಿಗೆ ಹೋದರಾದೀತೇ?

**ರಮಾನಾಥನ್**—ತಪ್ಪಿ ಮಾತಾಡಬೇಡಿ ರಾಯರೇ!

**ಯಶವಂತರಾವ್**—ಅಹಹ! ನಿನ್ನ ಹೆಂಡತಿಯೆಂದರೆ ನಿನಗಷ್ಟು ಅಭಿಮಾನವೇ? ನನ್ನ ಮಗಳು ಬಜಾರಿಣಿಯೇ?

**ರಮಾನಾಥನ್**—ನೀವು ಆಗಲೇ ಎಚ್ಚರದಿಂದಿರಬೇಕಿತ್ತು. ಆಗ ಕಣ್ಮುಚ್ಚಿಕೊಂಡಿದ್ದು ಈಗ ಬಾಯಿಗೆ ಬಂದಂತೆ ಮಾತಾಡಿದರೆ ಹೇಗೆ?

**ಯಶವಂತರಾವ್**—ಹೌದು, ಅದು ನನ್ನ ತಪ್ಪು. ಆದರೆ ನೀವು ಒಂದಿಷ್ಟು ವಿಚಾರವಿಲ್ಲದ ಪಶುವೇ? 4 ಮಕ್ಕಳ ತಂದೆಯೆನ್ನುವೆಯಲ್ಲ ಮತ್ತೆ?

**ರಮಾನಾಥನ್**—ನೀವು ಏನೇ ಹೇಳಿ. ನನಗೆ ಲೀಲಾವತಿಯನ್ನು ಮದುವೆಯಾಗಿ ಇಲ್ಲಿರಲು ಎಷ್ಟುಕ್ಕೂ ಸಾಧ್ಯವಿಲ್ಲ.

**ಯಶವಂತರಾವ್**—ಸಾಧ್ಯವಿಲ್ಲವೆಂದರಾಗದು. ಸಾಧ್ಯಮಾಡಬೇಕು. ನಿನ್ನ ಮತ್ತು ಲೀಲಾವತಿಯ ಮದುವೆಯು ನಾಳೆಯೇ ಆಗಬೇಕು ಇಲ್ಲವಾದರೆ ದಗೆಗಾರನೆಂದು ನಿನ್ನನ್ನು ದಸ್ತಗಿರಿಮಾಡಿಸದಿದ್ದರೆ ನಾನು ಹೈಕೋರ್ಟಿನ ಜಡ್ಜ್ ಸರ್ ಯಶವಂತರಾಯನಲ್ಲ. ಏನೆಂದು ಗ್ರಹಿಸಿದೆ?

**ರಮಾನಾಥನ್**—ರಾಯರೆ, ಕ್ಷಮಿಸಿರಿ. ನಾನು ಲೀಲಾವತಿಯನ್ನು ಮದುವೆಯಾಗುವೆನು. ಆದರೆ ನನಗೆ ಸ್ವಲ್ಪ ಸಮಯ ಕೊಡಿ ಅದಕ್ಕೆ.

**ಯಶವಂತರಾವ್** –ಎಷ್ಟು ದಿನ ಬೇಕು? ಈಗ ಒಪ್ಪಿ ನಾಳೆ ತಪ್ಪಿದರೆ?

**ರಮಾನಾಥನ್**—ಇಲ್ಲ, ಇಲ್ಲ ರಾಯರೆ? ನಾನು ನಿಮಗೆ ಮೋಸಮಾಡಿ ಇರುವುದಿಲ್ಲ? ನಾನಿನ್ನು ಕೆಲವು ದಿನಗಳಲ್ಲಿಯೇ ನನ್ನ ಪತ್ನಿಯನ್ನು ಅವಳ ತಾಯಿಮನೆಗೆ ಕಳುಹಿಸಿ ಆ ಮೇಲೆ ಲೀಲಾವತಿಯನ್ನು ಮದುವೆಮಾಡಿಕೊಳ್ಳುವೆನು. ಅವಳಿದ್ದಂತೆಯೇ....

**ಯಶವಂತರಾವ್**—ಆಗಲಿ, ಇನ್ನು 15 ದಿವಸಗಳೊಳಗೆ ನೀನು ಲೀಲಾವತಿಯನ್ನು ಮದುವೆಯಾಗದಿದ್ದರೆ ನಿನ್ನನ್ನು ದಸ್ತಗಿರಿ ಮಾಡಿಸುವುದು ನಿಶ್ಚಯ. ಜಾಗ್ರತೆ! (**ಹೋಗುವನು. ರಮಾನಾಥನನೂ ಖಿನ್ನನಾಗಿ ಹೊರಟು ಹೋಗುವನು.**)

---

## ೨೮ನೇ ದೃಶ್ಯ—ಬೀದಿ

[**ಹುಬ್ಬಳ್ಳಿ ಪೇಟೆಯ ರಸ್ತೆಯಲ್ಲಿ ಸಾದಾ ಉಡುಗೆಯಲ್ಲಿದ್ದ ಗುಪ್ತ ಪೋಲೀಸ್ ಇನ್ಸ್‌ಪೆಕ್ಟರನೊಬ್ಬನೂ ಮುಕುಂದರಾಯನೂ ಅವಸರದಿಂದ ಹೋಗುತ್ತಾ ಮಾತಾಡುತ್ತಿರುವರು**]

**ಮುಕುಂದ**—ನಿಶ್ಚಯವಾಗಿಯೂ ಪ್ರಭಾಕರನೇ ಅಲ್ಲವೇ? ನೀವು ಚೆನ್ನಾಗಿ ನೋಡಿರುವಿರಲ್ಲ?

**ಇನ್ಸ್‌ಪೆಕ್ಟರ್**—ಚೆನ್ನಾಗಿ ನೋಡಿರುವೆನು. ಅವರೇ, ಪ್ರಭಾಕರರಾಯರೇ.

**ಮುಕುಂದ**—ಹ್ಯಾಗಿರುವನು? ಸೌಖ್ಯವಾಗಿರುವನೇ?

**ಇನ್ಸ್‌ಪೆಕ್ಟರ್**—ಸೌಖ್ಯದಿಂದಿರುವರು. ಅವರ ಆನಂದವೇ ಆನಂದ ಈಗ.

**ಮುಕುಂದ**—ಅವನಿಗೆ ಸುಧೆಯು ಹೇಗೆ ಸಿಕ್ಕಿದಳು? ಎಂತಹ ವಿಚಿತ್ರ ಸಮ್ಮಿಲನವಿದು! ಇನ್ಸ್‌ಪೆಕ್ಟರ್ ಸಾಹೇಬರೆ, ಈ ಎಲ್ಲಾ ಅನಾಹುತಕ್ಕೂ ಮೂಲ ಕಾರಣ ನಾನು. ನಾನು ಘಾತಕಿ, ಮಹಾಪಾತಕಿ. ಯಾವ ಮುಖದಿಂದ ನಾನು ಪ್ರಭಾಕರ ಸುಧೆಯರನ್ನು ಹೋಗಿ ಕಾಣಲಿ? ಅವರು ನನ್ನ ಮುಖ ಸಹ ನೋಡನಿದ್ದರೆ?

**ಇನ್ಸ್‌ಪೆಕ್ಟರ್**—ತಪ್ಪು ನಿಮ್ಮದಾಗಿರುವಾಗ ಅವರು ನೋಡದಿದ್ದರೂ ನೀವು ನೋಡಬೇಕು. ನೀವು ಕ್ಷಮೆ ಕೇಳಬೇಕು. ಪ್ರಭಾಕರ ರಾಯರೀಗ ನವಜೀವನವನ್ನೇ ಆರಂಭಿಸಿದಂತಿದೆ.

**ಮುಕುಂದ**—ಅಂದರೆ?

**ಇನ್ಸ್‌ಪೆಕ್ಟರ್**—ಅಂದರೆ, ಅವರೀಗ ಬಡಕೂಲಿ ಜೀವನ ನಡಿಸುತ್ತಿದ್ದಾರೆ. ಹಿಂದಿನ ಜೀವನದ ಕುರಿತು ತೀವ್ರ ಜುಗುಪ್ಸೆ ಹುಟ್ಟಿದೆ ಅವರಲ್ಲಿ. ಆ ಪ್ರಸ್ತಾವ ವೆತ್ತಿದರಾಗುವುದಿಲ್ಲ ಅವರಿಗೆ.

**ಮುಕುಂದ**—ಅವನೇನೇ ಆಗಿರಲಿ ಅವನನ್ನೊಮ್ಮೆ ನೋಡುವನಕ ನನ್ನ ಪ್ರಾಣವೇ ನನ್ನ ಸ್ವಾಧೀನವಿಲ್ಲ. ನಡೆಯಿರಿ, ಬೇಗನೆ ಅವನಿದ್ದಲ್ಲಿಗೆ ಹೋಗುವ. (ಇಬ್ಬರೂ ಹೋಗುವರ

---

# ೨೯ನೇ ದೃಶ್ಯ—ಮನೆ

[ಸುಧೆಯ ಮನೆ. ಅಂಗಳದಲ್ಲಿ ಕೊರಗನು ಕಟ್ಟಿಗೆ ಒಡೆಯುತ್ತಿರುವಾಗ ಅವನ ಮೈಯೆಲ್ಲಾ ಬೆವರಿಹೋದುದನ್ನು ಕಂಡು ಅವನು ಸೋತನೆಂದು ತಿಳಿದು ಅವನಿಂದ ಕೊಡಲಿಯನ್ನು ಕಸಕೊಂಡು ಪ್ರಭಾಕರರಾಯನು ಕಟ್ಟಿಗೆ ಒಡೆಯಲಾರಂಭಿಸುವನು. ತುಸು ಹೊತ್ತಿನಲ್ಲಿ ಅವನ ಕೈಯಲ್ಲಿ ಬೊಕ್ಕೆ ಎದ್ದು ಒಡೆಯಲು ಅವನು ಅದನ್ನೇ ನಿಂತು ನೋಡುತ್ತಿರುವಾಗ ಸುಧೆಯು ಪ್ರವೇಶಿಸುವಳು.]

**ಸುಧಾ**—ಪ್ರಿಯಕರ ಏನು ಕೆಲಸವಿದು? ಕೈಯಲ್ಲಿ ಗುಳ್ಳೆಯೆದ್ದು ಒಡೆದು ಹೋಗುವ ವರೆಗೂ ಕಟ್ಟಿಗೆ ಒಡೆಯುವುದೇ?

**ಪ್ರಭಾಕರ**—ಇಲ್ಲ, ಇಲ್ಲ ಏನಿಲ್ಲ ಪ್ರಿಯೆ. ಮೊದಲೇ ಅಲ್ಲೊಂದು ಕಜ್ಜಿ ಯಿದ್ದಿತು. ಅದು ಒಡೆಯಿತಷ್ಟೆ!

**ಸುಧಾ**—ಬಲ್ಲೆ, ಬಲ್ಲೆ. ಅಂಗೈಯಲ್ಲಿ ಕಜ್ಜಿಯೇ? (ಪ್ರಭಾಕರನ ಅಂಗೈ ಹಿಡಿದೆತ್ತಿ ಪರೀಕ್ಷಿಸಿ) ಹೇಗೂ ಕಟ್ಟಿಗೆ ಒಡೆಯುವುದೇ? ಸಾಕಿನ್ನು. (ಪ್ರಭಾಕರನ ಕೈಯಲ್ಲಿದ್ದ ಕೊಡಲಿಯನ್ನು ತೆಗೆದುಕೊಂಡು ಬಿಸಾಡಿ ಅವನನ್ನು ಮನೆಗೆ ಕರತರುವಳು)

**ಪ್ರಭಾಕರ**—ಕೊರಗ ಯಾವಾಗಲೂ ಕಟ್ಟಿಗೆ ಒಡೆಯುತ್ತಿದ್ದಾನಲ್ಲ ಹೇಗೆ? ಅವನ ಕೈಗಳಾದರೂ ಎಷ್ಟು ನೋವಾಗಬೇಕೋ ಪಾಪ!

**ಸುಧಾ**—ಅವರಿಗೇನೂ ನೋವಾಗುವುದಿಲ್ಲ. ಅವರಿಗೆ ಆ ಕೆಲಸಮಾಡಿ ಅಭ್ಯಾಸವಿದೆ. ನಿಮಗ್ಯಾಕೆ ಬೇಕಿತ್ತದು?

**ಪ್ರಭಾಕರ**—ಯಾಕೆ ಬೇಕಿತ್ತೆಂದರೇನು ಸುಧಾ? ನಾನೂ ಕೊರಗನ ಹಾಗೆಯೇ ಮನುಷ್ಯನಲ್ಲವೇ? ಅವನೇ ಆ ಕೆಲಸಮಾಡಿಕೊಂಡಿರಬೇಕೆಂದೇನು? ಮುದುಕನಲ್ಲವೇ ಅವನೀಗ ಪಾಪ?

**ಸುಧಾ**—ಪ್ರಿಯ, ನಾನು ನಿಮ್ಮ ಹಿಂದಿನ ಜೀವನದ ಸ್ಥಿತಿಯನ್ನೂ, ಆ ಸ್ಥಾನ ಮಾನ ಗೌರವಾದಿಗಳನ್ನೂ, ಇಂದಿನ ಈ ದೀನ ಹೀನಾವಸ್ಥೆಯನ್ನೂ ಪರಿಶೋಲಿಸುವಾಗ ನನ್ನ ಹೃದಯವೇ ಬಿರಿಯುವಂತಾಗುವುದು. ನನಗಾಗಿ ಎಂತಹ ಸಂಕಷ್ಟವನ್ನೆಲ್ಲಾ ನೀವು....

**ಪ್ರಭಾಕರ**—ಪ್ರಿಯೆ, ಇನ್ನೂ ಆ ಗತಜೀವನದ ಪ್ರೇತಪೀಡೆಯು ನಿನ್ನನ್ನು ಬಿಟ್ಟಿಲ್ಲವೇ? ಭೀಕರ ಕನಸೆಂಬಂತೆ ಸಂದುಹೋದ ಆ ಜೀವನವು ಜೀವನವೇ? ನಾನು ನಿಜವಾದ ಜೀವನಸುಖವನ್ನನುಭವಿಸುವುದೆಂದರೆ ಈಗ ಸುಧಾ. ಜೀವಿಗೆ ಬೇಕಾದುದು ಸುಖ. ಆ ಸುಖವಿಲ್ಲದೆಯುದ ಸ್ಥಾನ, ಮಾನ ಗೌರವಗಳಿಂದೇನು?

(**ಮುಕುಂದರಾಯನೂ ಪೋಲೀಸ್ ಇನ್ಸ್ಪೆಕ್ಟರನೂ ಪ್ರವೇಶಿಸುವರು**)

**ಮುಕುಂದ**—ಪ್ರಭಾ (**ಮುಂದೆ ಮಾತಾಡಲಾರದೆ ಕಣ್ಣೀರಿಳಿಸುತ್ತಾ ಸುಮ್ಮನೆ ನಿಲ್ಲುವನು.**)

**ಪ್ರಭಾಕರ**—ನೀವು ಹೇಗೆ ಇಲ್ಲಿಗೆ ಬಂದುದು? ಇವರಾರು? ನಾನಿಲ್ಲಿರುವೆನೆಂದು ನಿಮಗೆ ಹೇಗೆ ತಿಳಿಯಿತು?

**ಮುಕುಂದ**—ಪ್ರಭಾ, ನನ್ನ ಘೋರ ಅಪರಾಧವನ್ನು ಕ್ಷಮಿಸುವೆಯೆಂದು ಮೊದಲು ಮಾತುಕೊಟ್ಟರೆ ಅನಂತರ ಸಂಗತಿಗಳನ್ನೆಲ್ಲಾ ತಿಳಿಸುವೆನು.

**ಪ್ರಭಾಕರ**—ನಾನೇನು ಕ್ಷಮಿಸುವುದಿನ್ನು? ನಿಮ್ಮ ಮಗ ಡಿಸ್ಟ್ರಿಕ್ ಜಡ್ಜ ಪ್ರಭಾಕರರಾಯನು ಹುಚ್ಚು ಹಿಡಿದು ಸತ್ತುಹೋಗಿರುವನು. ನೀವು ಬೇಕಾದರೆ ಅವನ ಪ್ರೇತ ಸಂಸ್ಕಾರ ನಡಿಸಿ ಆತನಾತ್ಮಕ್ಕೆ ಶಾಂತಿ ದೊರೆವಂತೆ ಮಾಡಿರಿ. ನಾನಾ ಪ್ರಭಾಕರರಾಯನಲ್ಲ. ಹುಬ್ಬಳ್ಳಿಯ ದೀನ ಶ್ರಮಜೀವಿ ಪ್ರಭಾಕರ. ನನ್ನ ಗೊಡವೆ ಬೇಡ ನಿಮಗೆ. ನನ್ನನ್ನೆಲ್ಲಿಯಾದರೂ ಸುಖವಾಗಿರಗೊಡಿರಿ.

**ಇನ್ಸ್ಪೆಕ್ಟರ್**—ನಾನು ಪೋಲೀಸ್ ಅಧಿಕಾರಿ. ಇದೆಂತಹ ಮಾತು ನಿಮ್ಮದು? ಎಷ್ಟಾದರೂ ಹೆತ್ತ ತಂದೆಯಲ್ಲವೇ? ಅವರೇನು ತಪ್ಪು ಮಾಡಿದು

## ವ್ಯಭಿಚಾರಿಣಿ ಯಾರು



ಪ್ರಭಾಕರ—ಮಮ ಪ್ರಾಣರನ್ನ ಬಾರೊ! ಬಾ!

(ಪುಟ 94)

ದಿದ್ದರೂ ಕ್ಷಮಿಸುವುದು ನಿಮ್ಮ ಕರ್ತವ್ಯವಲ್ಲವೇ? ಅವರೀಗ ನಿಮ್ಮನ್ನೊಮ್ಮೆ ಕಾಣಲು ಎಷ್ಟು ಪ್ರಯತ್ನಪಟ್ಟಿರುವರು! ಎಷ್ಟೊಂದು ಆತುರಗೊಂಡಿರುವರೆಂಬುದನ್ನು ನಾನು ಚೆನ್ನಾಗಿಬಲ್ಲೆ. ನೀವು ಇಲ್ಲಿರುವಿರೆಂದು ನಾನವರಿಗೆ ತಿಳಿಸಿದೊಡನೆಯೇ ಅವರಿಗೆ ಹೊಸ ಪ್ರಾಣವೇ ಬಂದಂತಾಯಿತು. ಅವರ ಆನಂದಕ್ಕೆ ಪಾರವೇ ಇಲ್ಲದಾಯಿತು.

**ಪ್ರಭಾಕರ**—ನಿಮ್ಮ ಆನಂದಕ್ಕೂ ಪಾರವೇ ಇಲ್ಲದಿರಬಹುದು ರೂ. ೧೦೦೦ ಒಳಗೆ ಬಿತ್ತೆಂದು! ಸಾಕು ನಿಮ್ಮ ಬುದ್ಧಿಮಾತು! ನಿಮ್ಮ ಕೆಲಸವೆಷ್ಟುಂಟೋ ಅದನ್ನು ಮಾಡಿ ಇಲ್ಲಿಂದ ಹೋಗಬಹುದು. ನನ್ನ ತಂದೆಯ ಕುರಿತು ನನ್ನ ಕರ್ತವ್ಯವೇನೆಂಬುದನ್ನು ನಿಮಗಿಂತಲೂ ಚೆನ್ನಾಗಿ ನಾನು ಬಲ್ಲೆ.

**ಇನ್ಸ್‌ಪೆಕ್ಟರ್**—(ಸಿಟ್ಟುಗೊಂಡು) ಮುಕುಂದರಾಯರೇ, ನನಗಿನ್ನು ಇಲ್ಲಿ ಕೆಲಸವಿಲ್ಲ. ನಾನು ಹೋಗುವೆನು. ನಮಸ್ಕಾರ.

**ಮುಕುಂದ**—ಆಯ್ತು ಸ್ವಾಮಿ, ಬಹಳ ಉಪಕಾರವಾಯಿತು.

**ಇನ್ಸ್‌ಪೆಕ್ಟರ್**—(ಏನೋ ತುಸು ಆಲೋಚಿಸುತ್ತಿರುವವನಂತೆ ನಟಿಸಿ) ನೀವು ಆಫೀಸಿಗೆ ಬರುವಿರಲ್ಲವೇ?

**ಮುಕುಂದ**—ಬರುತ್ತೇನೆ ಸ್ವಾಮಿ. (ಇನ್ಸ್‌ಪೆಕ್ಟರನು ಹೋಗುವನು)

**ಮುಕುಂದ**—ಪ್ರಭಾ, ಈ ವೃದ್ಧಾಪ್ಯದಲ್ಲಿ ನೀನಲ್ಲದಿದ್ದರೆ ನನಗಿನ್ನಾರು ಗತಿ? ನನ್ನ ಒಬ್ಬನೇ ಒಬ್ಬ ಪುತ್ರನೂ ನನ್ನನ್ನೀ ರೀತಿ ತಿರಸ್ಕರಿಸಿಬಿಟ್ಟಮೇಲೆ....

**ಪ್ರಭಾಕರ**—ನಿಮಗೆ ನಿಮ್ಮ ಸ್ಥಾನ ಮಾನವಿದೆ, ಆಸ್ತಿ ಬದುಕಿದೆ, ಸಮಾಜವಿದೆ! ಎಲ್ಲಕ್ಕಿಂತಲೂ ಹೆಚ್ಚಾಗಿ ನಿಮ್ಮ ಮಿತ್ರ ಹೈಕೋರ್ಟು ಜಡ್ಜ್ ಸರ್. ಯಶವಂತರಾಯರಿದ್ದಾರೆ! ನಾನು ಮತಿಗೇಡಿ, ಗತಿಹೀನ, ಮಾನಮರ್ಯಾದೆಯಿಲ್ಲದವ! ನನ್ನ ಪತ್ನಿಯು ವ್ಯಭಿಚಾರಿಣಿ! ಕುಲಕಳಂಕಿನಿ! ದುರಾಚಾರಿಣಿ! ನನ್ನ ಪ್ರಿಯ ಬಂಧುವಾದ ಕೊರಗನು ಅತಿ ನೀಚ ಜಾತಿಯ ದೀನ ಮಾನವನು! ನನ್ನ ಮಗುವು ಹಾದರದ್ದು! ನಿಮಗಿನ್ನು ನನ್ನನ್ನು ಮಗನೆಂದು ಸ್ವೀಕರಿಸಿಕೊಳ್ಳಲು ಸಾಧ್ಯವಿಲ್ಲ. ಕಡೆಗಾಲದಲ್ಲಿ ನೀವಂತಹ ಅನಾಚಾರ, ಅನೀತಿ ಮತ್ತು ಅಧರ್ಮಮಾಡಿ ಸಮಾಜ ಬಹಿಷ್ಕಾರಕ್ಕೊಳಗಾಗಿ ಬಹು ಪ್ರಯಾಸದಿಂದ ಗಳಿಸಿದ ಹೆಸರನ್ನು ಅಳಿಸಬೇಡಿರಿ! ಇಹಪರಗಳೆರಡಕ್ಕೂ ವಿಘಾತವನ್ನುಂಟುಮಾಡಬೇಡಿರಿ. ನನಗೆ ಇಹವಿಲ್ಲ! ಪರವಿಲ್ಲ! ನೀತಿಯಿಲ್ಲ!

ಧರ್ಮವಿಲ್ಲ! ಸಮಾಜವಿಲ್ಲ! ಬಂಧುಬಳಗವಿಲ್ಲ! ಈ ವರೆಗೆ ಎಲ್ಲವನ್ನೂ ಕಟ್ಟಿ ಕೊಂಡು ನಾನು ಪಟ್ಟ ಸುಖ ಸಾಕು! ಈಗ ಸರ್ವವನ್ನೂ ಬಿಟ್ಟು ಸುಖ ದೊರೆ ವುದೋ ನೋಡುವೆನು.

**ಸುಧಾ**—(ಒಮ್ಮೆಯೇ ಕಣ್ಣೀರಿಳಿದು ಬರಲು ಸೆರಗಿಂದೊರಸಿಕೊಂಡು) ಪ್ರಿಯ, ಇದೇಕೆ ಇಷ್ಟೊಂದು ನಿಷ್ಠುರವಾಗಿ ಮಾತಾಡುವಿರಿ? ಎಷ್ಟಾದರೂ ನಿಮ್ಮ ತಂದೆ ಯಲ್ಲವೇ ಅವರು?

**ಪ್ರಭಾಕರ**—ಏತಕ್ಕಾಗಿಯೆಂದು ನೀನರಿಯೆಯಾ ಸುಧಾ?—ನಿನಗಾಗಿ. ಯೋಚಿಸು, ಯೋಚಿಸು ಸುಧಾ, ನೀನು ಪಟ್ಟ ಪಾಡನ್ನೊಮ್ಮೆ ಯೋಚಿಸು. ಅಹ! ತುಳಸಿಬಾಯಿ! ತುಳಸಿಬಾಯಿ!! (ಉದ್ವೇಗಭರದಿಂದ ಕಂಠವು ಬಿಗಿಯಲ್ಪಟ್ಟು ಸುಮ್ಮನೆ ನಿಂತುಬಿಡುವನು. ಸುಧೆಯ ಕಣ್ಣಲ್ಲಿ ಧರಧರನೆ ಕಣ್ಣೀರಿಳಿಯುವುದು)

**ಕೊರಗ**—ಅಮ್ಮಾ ಏನಾಯಿತು? ಯಾಕೆ ಹೀಗೆ ಕಣ್ಣೀರಿಳಿಸುತ್ತಿರುವುದು? (ದುಃಖಿಸುತ್ತಾ ಸುಧೆಯ ಕಣ್ಣೀರೊರಸುವನು. ಮುಕುಂದರಾಯನು ಕರವಸ್ತ್ರವನ್ನು ಬಾಯಿಗೆ ತುರುಕಿಸಿಟ್ಟು ಮುಖವನ್ನೊಂದು ಬದಿಗೆ ತಿರುಗಿಸಿ ಬಾಯ್ಬಿಟ್ಟು ಅಳುವನು.)

**ಸುಧಾ**—ಪ್ರಿಯಕರ, ಲೋಕದಲ್ಲಿ ತಂದೆತಾಯಿಗಿಂತ ಹೆಚ್ಚಿನ ಬಂಧುವಿಲ್ಲ. ನೀವು ನನಗಾಗಿ, ತಂದೆಯನ್ನೂ ತಿರಸ್ಕರಿಸಿ ನನಗೆ ಮಾಡಿದ ಅಪರಾಧಕ್ಕೆ ತಕ್ಕ ಪರಿಹಾರಮಾಡಿದಿರಿ. ಇನ್ನೀಗ ನನಗಾಗಿ ನಿಮ್ಮ ಪಿತನನ್ನು ಕ್ಷಮಿಸಿ ಪುರಸ್ಕರಿ ಸಿರಿ. ಅವರ ವೃದ್ಧ ಹೃದಯವು ಅದೆಷ್ಟು ಕೊರಗುತ್ತಿರುವುದೋ ಏನೋ?

**ಪ್ರಭಾಕರ**—ಪರಮಪಾವನೆಯಾದ ನಿನಗೆ ಅಕ್ಷಮ್ಯ ಅಪರಾಧಮಾಡಿ ಯಮಯಾತನೆಗೀಡುಮಾಡಿದವರನ್ನು ನಿನಗಾಗಿ ಕ್ಷಮಿಸಿ ಪುರಸ್ಕರಿಸಬೇಕೆ? ಅಹ, ಸುಧಾ ನಿನ್ನ ಹೃದಯವೇ!

**ಮುಕುಂದ**—(ಉಕ್ಕಿ ಉಕ್ಕಿ ಬರುವ ದುಃಖವನ್ನು ಕಟ್ಟಿಕೊಂಡು) ದೇವಿ, ಕ್ಷಮೆಯ ಮೇರೆ ಮೀರಿದೆ ನಾನು ನಿನಗೆ ಮಾಡಿದ ಅಪರಾಧ! ಇಲ್ಲ, ಇಲ್ಲ, ಸುಧಾ ನನಗೆ ಕ್ಷಮೆಯಿಲ್ಲ. ನಾನು ನಿನಗೆ ಮಾಡಿದ ಘೋರ ಪಾಪವನ್ನು ನೆನೆ ನೆನೆದು ಕರಗಿ ಕರಗಿ ಕೊಳೆತು ಹುಳಿತು ಸಾಯಬೇಕು. ಅದೇ ನನಗೆ ತಕ್ಕ ಪ್ರಾಯಶ್ಚಿತ್ತ! ಪ್ರಭಾ! ಪ್ರಭಾ!! (ಪುನಃ ಬಾಯ್ಬಿಟ್ಟು ಅಳಲಾರಂಭಿಸುವನು)

**ಪ್ರಭಾಕರ**—(ಚಪಲ ಕನಿಕರಗೊಂಡು) ಅಪ್ಪಾ, ನೀವೀ ರೀತಿ ದುಃಖಿಸು ವುದು ಸರಿಯಲ್ಲ. ನಾನೇನೊ ಆವೇಗಭರದಿಂದ ನಿಮ್ಮ ಹೃದಯವನ್ನು ಚುಚ್ಚಿ ಮಾತಾಡಿದೆ. ಅದಕ್ಕಾಗಿ ನನ್ನನ್ನು ಕ್ಷಮಿಸಿರಿ.

**ಮುಕುಂದ**—ನಿನ್ನನ್ನು ನಾನು ಕ್ಷಮಿಸುವುದೆ ಪ್ರಭಾ! ನೀನೆಷ್ಟೊಂದು ಕ್ರೂರ ವಾಗ್ಬಾಣ ಪ್ರಯೋಗಮಾಡಿದರೂ ಈ ಅಸ್ಥಿಪಂಜರಕ್ಕೆ ನಾಟದು. ನೀನಾ ಯೋಚನೆ ಬಿಡು. ಪ್ರಭಾ, ನಾನು ಸುಧೆಗೆ ಮಾಡಿದ ಘೋರ ಅನ್ಯಾಯದ ಪ್ರತಿಫಲವನ್ನು ಪ್ರತ್ಯಕ್ಷ ಪಡೆದಿರುವೆನು. ಇಲ್ಲ, ಪ್ರಭಾ, ಇಲ್ಲ. ಈ ಲೋಕದ ಹೊರತು ಇನ್ನೊಂದು ಸ್ವರ್ಗ ನರಕ, ಶಿಕ್ಷೆ, ರಕ್ಷಣೆಯೆಂಬುದಿಲ್ಲ.

**ಪ್ರಭಾಕರ**—ಅದೇನದು ನೀವು ಪ್ರತ್ಯಕ್ಷ ಪಡೆದ ಫಲ?

**ಮುಕುಂದ**—ಯಾರನ್ನು ನಾನು ವ್ಯಭಿಚಾರಿಣಿ, ದುರಾಚಾರಿಣಿಯೆಂದು ಸಿದ್ಧಪಡಿಸಿ ಅಸಹನೀಯ ಸಂಕಷ್ಟಕ್ಕೀಡುಮಾಡಿದ್ದೆನೋ ಅವಳೆ ಈಗ ಪರಮ ಪಾವನೆಯೆಂದು, ಸಾಧ್ವೀಮಣಿಯೆಂದು ಸಿದ್ಧವಾಗಿರುವುದು. ಆ ದೇವಿಯೇ ನನ್ನ ಘೋರ ಅಪರಾಧವನ್ನು ಕ್ಷಮಿಸುವ ಕೃಪೆದೋರಿರುವಳು. ಯಾರನ್ನು ನಾನು ಸತ್ಕುಲಪ್ರಸೂತೆ, ಸದಾಚಾರಸಂಪನ್ನೆಯೆಂದು ನಂಬಿ ನನ್ನ ಸೊಸೆಯಾಗಿ ಮಾಡಿ ಬಹಳ ಪ್ರೀತಿಯಿಂದ ನೋಡಿಕೊಂಡು ಬಂದೆನೊ ಅವಳೇ ತುಚ್ಛ ಜಾರಿಣಿಯೆಂಬುದೀಗ ಜನಜನಿತವಾಗಿರುವುದು. ನನಗೆ ತಕ್ಕ ಶಾಸ್ತಿಯಾಯಿತು; ಅವಳಿಗೂ ತಕ್ಕ ಗತಿ ದೊರೆಯಿತು.

**ಸುಧಾ**—(ಉತ್ಸುಕತೆಯಿಂದ) ಏನು ಏನಾಯಿತವಳಿಗೆ?

**ಮುಕುಂದ**—ಕುಡಿದು ಸ್ವೇಚ್ಛಾಚಾರಿಣಿಯಾದ ಅವಳನ್ನು ನಾನು ನನ್ನ ಮನೆಯಿಂದ ಹೊರಹಾಕದೆ ನಿರ್ವಾಹವಿಲ್ಲದಂತಾಯಿತು. ಅವಳು ಮದ್ರಾಸಿಗೆ ಹೋಗಿ ತಂದೆಯ ಮನೆಯಲ್ಲಿದ್ದು ಅಲ್ಲಿಯೂ ಇಚ್ಛಾನುಸಾರ ಕುಡಿದು ಬಜಾರಿಣಿಯಾಗಿ ಒಂದು ದಿನ ಅಪರರಾತ್ರಿಯಲ್ಲಿ ಡಾಕ್ಟರ್ ರಮಾನಾಥನ್ ಎಂಬ ದುರಾತ್ಮನೊಂದಿಗೆ ಮೋಟರ್‌ಕಾರಿನಲ್ಲಿ ಎಲ್ಲಿಗೊಹೋಗುತ್ತಿರುವಾಗ ಮೋಟರು ಕಾರು ಸೈನ್ಯಾಧಿಕಾರಿಯೊಬ್ಬರ ಕಾರಿಗೆ ಢಕ್ಕೆ ಬಡೆದು ಲೀಲಾವತಿಯು ಆಕ್ಷಣ ಕೊಲ್ಲಲ್ಪಟ್ಟಳು. ಡಾಕ್ಟರ್ ರಮಾನಾಥನನಿಗೆ ಪ್ರಾಣಾಂತಿಕ ಪೆಟ್ಟಾಗಿರುವುದು. ಮೋಟರ್ ಅಪಘಡದ ಚಿತ್ರದೊಂದಿಗೆ ಈ ಸಮಾಚಾರವು ಪತ್ರಿಕೆಗಳಲ್ಲೆಲ್ಲಾ ಪ್ರಕಟವಾಗಿರುವುದು. ನೋಡು. (ಮೋಟರ್ ಅಪಘಡದ ಚಿತ್ರವಿರುವ ಪತ್ರಿಕೆಯ ತುಂಡೊಂದನ್ನು ತೆಗೆದು ಸುಧೆಗೆ ತೋರಿಸುವನು.)

**ಸುಧಾ**—ಪಾಪ, ಎಂತಹ ಭೀಕರ ಗತಿಯಿದು! (ಅರವಿಂದನು ಓಡಿಬರುವನು ಮುಕುಂದರಾಯನು ಅವನನ್ನು ಹಿಡಿದೆತ್ತಿ ಮುದ್ದಾಡುವನು.)

---

*

# ವ್ಯಭಿಚಾರಿಣಿ ಯಾರು?

# ನಾಟಕದ ಪದ್ಯಾವಳಿ

---

ಕೌಶಿ ಕಾನಡ - ದ್ರುಪದ.

**ಪ್ರಾರ್ಥನೆ:**— ಅನುಪಮಗುಣ ಭೂಷಿತೇಶ ಆಶ್ರಿತಜನ ಪಾಲ ಶ್ರೀಶ ।
ಪರಮೇಶ್ವರ ದೇವ ದೇವ ನಮಿಪೆ ಮಂಗಲಾತ್ಮ ॥ ಅನು ॥
ಲೋಕೇಶ್ವರ ವಿಶ್ವರೂಪ । ಪರಮಪುರುಷ ಪಾಪನಾಶ ।
ಪ್ರಾಣೇಶ್ವರ ಪ್ರಾಣಾಧಾರ ಪಾಹಿ ಅಂತರಾತ್ಮ ॥

(ಪುಟ 7, ಕಡೆಗೆ (ಮಿಶ್ರಪೀಲು, ತ್ರಿತಾಳ.

೨ **ಸುಧಾ**— ಪ್ರೇಮ ವಿಯೋಗ ವಿದ । ತಾಳೆ ನಾ ।
ಹೃದಯವೆ ಪ್ರಬಲ । ಕೋಲಾಹಲಮಯ ।
ಕಾರಣವೇನೋ । ತಿಳಿಯೆ ನಾನು ॥ ಪ್ರೇಮ ॥
ಮನವತಿ ಭೀತಿ । ಗೊಳುತಿಹುದೀಗ ।
ಶಾಂತಿವಿರಹಿತ । ಜೀವನವೆನ್ನ ॥

(ಪುಟ 14, ಪಂಕ್ತಿ 15) ಮಿಶ್ರಕಾಫಿ ಸಿಂಧೂರ — ತ್ರಿತಾಳ

೩ **ಪ್ರಭಾಕರ**— ಬಾರೇ ಸುಂದರೀ । ಮುದದೋರು ಪ್ರಿಯೆ ಸುಂದರೀ ॥
ಏತಕೇ ಮುಗುಡಬಿಡು ನೀ ದುಗುಡಬಿಡು ಪ್ರೇಮಮೂರ್ತಿಸುಂದರಿ॥
ಅಧರ ಸುಧಾರಸ ಸವಿಸಿ ತೋಷದೆ । ಹೃದಯದ ತಾಪವ ತಣಿಸು ಕಾಂತೇ ॥
ಸರಸ ಸುಖದಲೀ ರಮಿಸುತೀಗಲೇ । ಪ್ರೇಮ ಸಾರ್ಥಕಗೊಳಿಸು ಸುಶೀಲೆ ॥

(ಪುಟ 14, ಪಂಕ್ತಿ 18) ರಾಗ—ಜಯ ಜಯ ವಂ॰, ತ್ರಿತಾಳ

೪ **ಅಮೃತರಾವ್**:—ಜನುಮ ವಿಫಲವಿದು । ಕರ್ಮವಿಹೀನ ।
ದೀನ ಮಾನವನ । ಗತಿಯತಿ ಹೀನ ॥ ಜನುಮ ॥
ಜಗದೆ ಜೀವನಕೆ । ದಾರಿ ತೋರದೆ ।
ಮನುಜ ಜನುಮ ನೀ । ರಸವಿರುತಿಹುದು ॥

(ಪುಟ 16, ಶುರು) ಪಹಡಿ ಮಾರಡ್ — ಕೇರವಾ.

೫ **ಸುಧೆ**— ಭಾವರೂಪವಿದೀಗ । ಪ್ರಿಯಕರನ ।
ಮನಮೋಹನನ । ಪ್ರಣಯಾರಾಮನ ॥ ಭಾವ ॥
ಪ್ರಣಯ ಕಟಾಕ್ಷ । ಬೀರಿಹ ಪ್ರೀತ ।
ತನುಮನ ಪರವು । ತೋಷೋಲ್ಲಾಸ ॥

(ಪುಟ 26, ಕಡೆಗೆ) ಸಾರಂಗ — ದಾದರ

೬ **ಅಮೃತರಾಯ**— ಮೋದದಿ ನೆರೆನಲಿವುದು ಮನ ।
ಜೀವನ ಸುಖದಾಶೆಯಿಂದ ॥ ಮೋದದಿ ॥
ಧನವ ಗಳಿಸಿ ಕಾಮಿನಿಯ ।
ವರಿಸಿ ಪಡೆದು ಕಾಮಿತವ ॥
ಸತತ ಸುಖವಿಲಾಸ ಪಡೆವ ।
ಜೀವನವದೆ ಭಾಗ್ಯಾಧಿಕ ॥

(ಪುಟ 47, ಪಂಕ್ತಿ 19) ಭೀಂ ಪಲಾಸ್ — ತ್ರಿತಾಳ

೭ **ಸುಧಾ**— ಅದೇಕೆ ವಿಧಾತ ಜನ್ಮವೀ ಪರಿ ।
ಹತಭಾಗ್ಯ ತುಚ್ಛ ಜನ್ಮವೀಪರಿ ॥ ಅದೇಕೆ ॥
ದುರಂತ ದುಃಖಕೆ ಭಾಗಿಯಾಗಿಹ ।
ಗತಿಯ ಹೇ ದೇವ ತಾಳ್ವೆನೆಂತು ಹಾ ॥

(ಪುಟ 53, ಶುರು) ಗಜಲ್ — ಕವಾಲಿ.

೮ **ಅಮೃತರಾಯ**— ನಾನೀಗಲು ಮತಿಗೇಡಿ ದುರಾತ್ಮ ।
ಪಾಪಿ ಜೀವನವಿದು ಗತಿಹೀನ ।
ಪಾವನ ಸ್ತ್ರೀಸುಖ ನಾಶವಗೈದ ।
ಪಾಪಿಗೀ ಗತಿಯಾದುದೆ ನ್ಯಾಯ ॥ ನಾನೀಗಲು ॥
ದುಷ್ಕಾರ್ಯವ ನಾ ಗೈಯ್ಯುತ ಸುಖವ ।
ಪಡೆವ ಭ್ರಾಂತಿಯಿಂದೀ ಜೀವನವ ।
ಶಾಂತಿರಹಿತವ ಗೈದೆ ಸತತ ॥

(ಪುಟ 63, ಶುರು) ತರಪತವಿತದಿನನ್ನೈನಾ— ಎಂಬಂತೆ

೯ **ಸುಧಾ**— ಜಗದೆ ಸುಖವಿನಿತ ಕಾಣೆ । ಜನುಮವಿದೆನಗೆ ಭೀಕರಪೀಡೆ॥
ಜೀವನವೆ ಅಶ್ರುಧಾರೆ ।
ಕಾರಿರುಳೆ ಕವಿದಿಹುದು । ಪಾರಗಾಣದ ಚಿಂತ ॥
ತಾಳೆನು ನಾನು ಜೀವನ ಸಾಕು ಮರಣ ಲೇಸು
ಜನುಮ ವಿಫಲವಾಹ । ವಿಧಿಯು ಹೃದಯಹೀನ ॥

(ಪುಟ 67, ಶುರು)

೧೦ **ರಮಾನಾಥನ್**—ಜೀವನ ನೀರಸವೆನಿಸುವುದೀಗ
ತಾಳೆನು ಆಹಾ ವಿರಹ ತಾಪ ॥
ಹೃದಯ ಮುಗುಡದ । ನೆಲೆಯಾಗಿರುತ
ಮನವೇ ಶಾಂತಿಹೀನವಿದಕಟ ।
ಮನಮೋಹಿನಿ ಬಾರದೆ ಹಾ ॥
ಪ್ರೇಮ ವಿನೋದಾನಂದದೊಳಿರುತ ।
ಒಲಿದು ನಲಿಯುವ ಮನದಾತುರವ
ತಣಿಸುವ ಬಗೆ ಕಾಣೆನಿಂದೀಗ ।
ಜಗವೇ ಮೋದ ವಿಹೀನ ॥

(ಪುಟ 77, ಶುರು) ಮಿಶ್ರದೇಶ್

೧೧ **ಪ್ರಭಾಕರ**— ಸಹಿಸೆ ಸಹಿಸೆ ಹೃದಯದ ಬೇಗೆಯನಾಹ ।
ಬರಿದೆ ಜನುಮ ಶಾಂತಿ ವಿರಹಿತ ॥
ಪ್ರಿಯೆಯ ಮಿಲನ ಸುಖ ಭಾಗ್ಯಹೀನ ।
ಜೀವನ ಘೋರ ಸ್ಮಶಾನ ಸಮಾನವೀಗ ।
ತಾಳುವೆನೆಂತಿದ ಬಾಳನಾಹ ।
ಮರಣವು ಬಾರದೇಕೋ ದೇವ ॥

(ಪುಟ 77, ಕಡೆಗೆ) ಸಾರಂಗ—ಝಂಪೆ

೧೨ **ಪ್ರಭಾಕರ**— ಪರಮಪಾವನೆ ಪ್ರಾಣ ಪ್ರಿಯೆಯ-ಜೀವನದ
ಸುಖವಿನಾಶಕ ಪರಮ ಪಾಪಿ ॥
ಸುಖಪಡೆವ ಸುಯೋಗ । ಈ ಧೂರ್ತಗಿಹುದೆನುವ ।
ಆಶೆಯಿೊ ಜೀವನದ ಭ್ರಾಂತಿ ॥

(ಪುಟ 78, ಶುರು) **ಗಜಲ್ — ಕವಾಚು**

೧೩ **ಅನ್ಮೃತರಾವ್**—ಮನುಜನಾಶೆ ವ್ಯರ್ಥವೆಲ್ಲ ಬರಿಯ ಭ್ರಾಂತಿಯು ।
ನಾನೊಂದನೆಣಿಸಲು ವಿಧಿ ತಾ ಬೇರೊಂದನೆಣಿಸಿದುದು ॥
ಮೋಸಕೆ ಬಲಿಯಾಗುತ ನಾ ಬಯಸಿದ ಸುಖವಳಿದಿಹುದು ॥

(ಪುಟ 84, ಕಡೆಗೆ) ಭೈರವಿ — ಝಂಪೆ.

೧೪ **ಪ್ರಭಾಕರ**—ನಿರಾಶಾಭರಿತವೀ ಜೀವನ ಘೋರ ।
ನರಕ ಸಮಾನ ಮರಣ ಬಾರದಾಹ ।
ಕ್ರೂರವಿಧಿ ತಾ ಬರಿಯ ಅಸ್ಥಿಪಂಜರವ ।
ಮಸಣಗೂಡಿಸದೆ ಕಾಡುವನೇಕೋ ॥
ಗತಿಗಾಣದೆ ಧೃತಿ ಗೆಟ್ಟಿಹೆ ದೇವ ।
ಗತಿದೋರೈ ಕರುಣಾಕರ ॥

(ಪುಟ 94, ಪಂಕ್ತಿ 13) **ಮಿಶ್ರ ಪಹಡಿ** — ಕೇರವ

೧೫ **ಪ್ರಭಾಕರ**—ಮಮ ಪ್ರಾಣರನ್ನ ಬಾರೊ ಬಾ ।
ಪ್ರೇಮಮೂರ್ತಿ ಮನಮೋಹನಾ ।
ಇದು ಸಾರ ಸಂಸಾರದಾ ।
ಹೃದಯಾಂಬುನಿಧಿ ಚಂದ್ರಮಾ ॥ ಮೋಹನಾ ॥

**ಮಾಲಕಂಸ** — ತ್ರಿತಾಳ

೧೬ **ಮಂಗಲ**— ಮಂಗಳ ಮಹಿಮಾ ಲೋಕೇಶನೆ ।
ಮಂಗಳರೂಪ ಮಂಗಳ ನಾಮಾ ।
ಮಂಗಳ ದಾಯಕ ಮಂಗಳವೀಯೋ ॥
ಲೋಕದೆ ನಿಜಪ್ರೇಮವ ನೆಲೆಗೊಳಿಸಿ ।
ಈಶನೆ ಮಂಗಳಮಯಗೊಳಿಸುವುದೈ. ॥

## ನಮ್ಮ ಗ್ರಂಥಮಾಲೆಯ ರಕ್ಷಕರು

೧ ಶ್ರೀಯುತ ಪಿ. ಲಕ್ಷ್ಮೀನಾರಾಯಣ ನಾಯಕರು, ಕಟಪಾಡಿ.
೨ ಶ್ರೀಯುತ ಕೆ. ಸುಬ್ರಾಯ ಚರ್ಡಪ್ಪ ಶ್ಯಾನುಭಾಗರು, ಕಟಪಾಡಿ.
೩ ಮೆಸ್ಸರ್ಸ್ ಮಲ್ಪೆ ವಾಮನ ಭಟ್ ಎಂಡ್ ಬ್ರದರ್, ಉಡುಪಿ.

---

## ಆಶ್ರಯದಾತರು

೧ ಶ್ರೀ ಅಂಬಾಡಿಬೀಡು ಗೋಪಾಲ ಶೆಟ್ಟರು, ಕಟಪಾಡಿ.
೨ ,, ತೋನ್ಸೆ ಜನಾರ್ದನಯ್ಯನವರು, ಉಡುಪಿ.
೩ ,, ಪಿ. ರಾಮದಾಸ ನಾಯಕರು, ಬಿ. ಎ., ಎಲ್. ಟಿ. ಕಟಪಾಡಿ.
೪ ಮಿ. ಯಫ್. ಯಕ್ಸ್. ಡಾಲ್ಮೀವರು, ಉದ್ಯಾವರ.
೫ ಶ್ರೀ 'ಕಾಮತ್' ಅವರು, ಕಟಪಾಡಿ.
೬ ,, ಪಾಂಗಾಳ ಜನಾರ್ದನ ನಾಯಕರು, ಕಟಪಾಡಿ.
೭ ,, ಕೆದಿಂಜೆ ವೆಂಕ್ಟಯ್ಯ ಹೆಗ್ಡೇರು, ಜಮೀನ್ದಾರ್, ಯೇಣಗುಡ್ಡೆ.
೮ ,, ಬಾಳ್ಕಟ್ಟಬೀಡು ಕೃಷ್ಣಯ್ಯ ಹೆಗ್ಡೇರು, ಡಿ. ಬೋ. ಮೆಂಬರ್.
೯ ,, ಕೆ. ಸೀತಾರಾಮ ದೊರೆ ಬಲ್ಲಾಳರು, ಕಟಪಾಡಿ ಬೀಡು.
೧೦ ,, ಎ. ಬಿ. ಶೆಟ್ಟರು, ಎಂ. ಎಲ್. ಸಿ. ಅತ್ತಾವರ, ಮಂಗಳೂರು.
೧೧ ,, ಕೆ. ವಾಸುದೇವ ಚರ್ಡಪ್ಪ ಶ್ಯಾನುಭಾಗರು, ಕಟಪಾಡಿ.
೧೨ ಮೆಸ್ಸರ್ಸ್ ಪಿ. ಎ. ಪೈ ಬ್ರದರ್ಸರವರು, ಉಡುಪಿ.
೧೩ ಶ್ರೀ ಯು. ಸದಿಯನವರು, ಜಮೀನ್ದಾರ್, ಉದ್ಯಾವರ.
೧೪ ,, ಬಿ. ವಾಸುದೇವ ರಾಯರು, ಎಡ್ವೊಕೇಟ್, ಉಡುಪಿ.
೧೫ ,, ಪಿ. ಆನಂದ ನಾಯ್ಕರು, ಮರ್ಚಂಟ್, ಕಟಪಾಡಿ.
೧೬ ,, ಬಿ. ರಾಮಣ್ಣ ಶೆಟ್ರು, ಹೇ. ಮಾ. ಹಾ. ಎ. ಶಾಲೆ, ಬಾರ್ಕೂರು.
೧೭ ,, ಕೆ. ಮುದ್ದಣ್ಣ ಶೆಟ್ಟರು, ಹೆಡ್ಮಾಸ್ಟರ್, ಕೊರಂಗ್ರಪಾಡಿ.
೧೮ ,, ಎಂ. ವಾಮನ ರಾಯರು, ಎಪೊಲೋ ಸ್ಟ್ರೀಟ್, ಬೊಂಬಾಯಿ.
೧೯ ,, ಪಿ. ರಾಮಚಂದ್ರ ರಾಯರು, M. B. & B. S. Ph. D. ವಿಶಾಖಪಟ್ಣ.
೨೦ ,, ಎಲ್ಲೂರು ಗುತ್ತು ಅಚ್ಚಣ್ಣ ಶೆಟ್ಟರು, ವೈನಾಡ್

೨೧ „ ಎ. ಬಿ. ಕೃಷ್ಣರಾಜರು, ಉಡುಪಿ.
೨೨ ಶ್ರೀ ಪಾದೂರು ಕೃಷ್ಣಯ್ಯ ಶೆಟ್ಟರು, ಪರೇಲ್, ಬೊಂಬಾಯಿ.
೨೩ „ ಯು. ವೆಂಕಟರಾಯ ಕಾಮತರು, ಉಡುಪಿ

## ಪೋಷಕರು

೧ ಶ್ರೀ ಕೆ. ರಾಮ ಕಾಮತರು, ಮರ್ಚಂಟ್, ಕಟಪಾಡಿ.
೨ „ ನಂದ್ಯಪ್ಪ ಹೆಗ್ಡೇರು, ಯೇಣಗುಡ್ಡೆ.
೩ „ ಕೆ. ಕೃಷ್ಣಯ್ಯ ಶೆಟ್ಟರು, ಪಡುಮನೆ, ಕೆಮ್ಮಣ್ಣುರು.
೪ „ ಕೆ. ನಾರಾಯಣ ಶೆಟ್ಟರು, ಜಮೀನ್ದಾರ್, ಕೊರಂಗ್ರಪಾಡಿ.
೫ „ ಯು. ಪರಮೇಶ್ವರ ಮೇಸ್ತ್ರರು, ಫಿಜಿಸಿಯನ್, ಉದ್ಯಾವರ.
೬ „ ಪುತ್ತಿಗೆ ಸುಬ್ಬಣ್ಣಾಚಾರ್ಯರು, ಉದ್ಯಾವರ ಕುದುರು.
೭ „ ಬೆಳ್ಕಳೆ ಕೆರೆಮನೆ ವೆಂಕಪ್ಪ ಶೆಟ್ಟರು, ಉಡುಪಿ.
೮ „ ಕುತ್ಪಾಡಿ ತಿಮ್ಮಪ್ಪ ಶೆಟ್ಟರು, ಉಡುಪಿ.
೯ „ ಬೆಳ್ಕಳೆ ಕೆರೆಮನೆ ನಾರಾಯಣ ಶೆಟ್ಟರು, ಉಡುಪಿ.
೧೦ „ ಕೊರಂಗ್ರಪಾಡಿ ತೇಜಪ್ಪ ಶೆಟ್ಟರು, ಉಡುಪಿ.
೧೧ „ ಕವಿರಾಜ ಮಹಾಬಲ ಶೆಟ್ಟರು, ಮಂಗಳೂರು.
೧೨ ಶ್ರೀಮತಿ ಮಂದಾಕಿನಿ ಬಾಯಿಯವರು, ವಿದುಷಿ, ಮದ್ರಾಸು.
೧೩ „ ನೇತ್ರಾವತಿ ಕೆ. ಶೆಟ್ಟಿ, ಉಡುಪಿ.
೧೪ ಶ್ರೀ ಎಂ. ಪದ್ಮನಾಭ ರಾಯರು, ಜಮೀನ್ದಾರ್, ಮಟ್ಟು.
೧೫ „ ಯು. ರಾಮಚಂದ್ರ ಮಯ್ಯರು, ಅಧ್ಯಾಪಕ, ಉದ್ಯಾವರ.
೧೬ „ ಎಂ. ವಿಟ್ಠಲ ಶೆಟ್ಟರು, ಅಧ್ಯಾಪಕ, ಮಲ್ಲಾರು.
೧೭ „ ಕೆ. ವಿ. ಕೃಷ್ಣಯ್ಯನವರು, ಹೆಡ್‌ಮಾಸ್ಟರ್, ಮಲ್ಲಾರು.
೧೮ „ ಕೆ. ಶೇಸು ಶೆಟ್ಟರು, ಅಧ್ಯಾಪಕ, ಕಾಪು.
೧೯ „ ಎಂ. ಅನಂತಕೃಷ್ಣ ರಾಯರು, ಹೆಡ್‌ಮಾಸ್ಟರ್, ಮಟ್ಟು.
೨೦ „ ಪಿ. ಮುದ್ದಣ್ಣ ಶೆಟ್ಟರು, ಬಿ. ಯಂ. ಸ್ಕೂಲ್, ಪಾದೂರು.
೨೧ „ ಯು. ದಾದು, ಹೆಡ್‌ಮಾಸ್ಟರ್, ಕೈಪುಂಜಾಲ್

*

೨೨ ಶ್ರೀ ಕೆ. ಮುದ್ದಣ್ಣ ಶೆಟ್ಟರು, ಕೆನರಾ ನರ್ಸರಿ, ಕಾಪು.
೨೩ ,, ಕೆ. ಪದ್ಮನಾಭ ಶ್ಯಾನುಭಾಗರು, ಹೆ. ಮಾ. ಕರಂದಾಡಿ.
೨೪ ,, ಕೆ. ಅಂತಯ್ಯ ಹೆಗ್ಡೇರು, ಜಮಿಾನ್ದಾರ್, ಕೂರಾಡಿ.
೨೫ ,, ಮಟ್ಪಾಡಿ ಶೀನಪ್ಪ ಶೆಟ್ಟರು, ಟೀಚರ್, ಬಾರ್ಕೂರು.
೨೬ ,, ಬೈಕಾಡಿ ರಾಮಣ್ಣ ಶೆಟ್ಟರು, ಅಧ್ಯಾಪಕ, ಬಾರ್ಕೂರು.
೨೭ ,, ಪೆರಂಪಳ್ಳಿ ಶೀನಪ್ಪ ಶೆಟ್ಟರು, ಟೀಚರ್, ಉಡುಪಿ.
೨೮ ,, ಹೆರ್ಗ ವಿಟ್ಠಲ ಶೆಟ್ಟರು, ಅಧ್ಯಾಪಕ, ಬಡಗಬೆಟ್ಟು.
೨೯ ,, ವೈ. ಶ್ಯಾಮರಾಯ ಹೆಗ್ಡೇರು, ಜಮಿಾನ್ದಾರ್, ಯೇಣಗುಡ್ಡೆ.
೩೦ ,, ಎಂ. ನಾರಾಯಣ ಶೆಟ್ಟರು, ಟೀಚರ್, ಮರ್ಣೆ.
೩೧ ಮೆಸರ್ಸ್ 'ಹೆಗ್ಡೆ ಬ್ರದರ್ಸ'ರು, ಎರ್ಮಾಳ್.
೩೨ ಶ್ರೀ ವೈ. ಅಂಗರ ಶೆಟ್ಟರು, ಅಧ್ಯಾಪಕ, ಎರ್ಮಾಳ್.
೩೩ ,, ವೈ. ತಬ್ರ ಶೆಟ್ಟರು, ಅಧ್ಯಾಪಕ, ಎರ್ಮಾಳ್.
೩೪ ,, ಪಿ. ರಾಮ ರಾಯರು, ಉಪಾಧ್ಯಾಯ, ಎರ್ಮಾಳ್.
೩೫ ಮೆಸರ್ಸ್ 'ಪ್ರಭು ಬ್ರದರ್ಸ'ರು, ಪಡುಬಿದ್ರಿ.
೩೬ ಶ್ರೀ ಯು. ನಾಗಪ್ಪ, ಫಿಶ್ಯರೀಸ್ ಇನ್ಸ್ಪೆಕ್ಟರ್, ಮಂಗಳೂರು.
೩೭ ,, ಎಚ್. ಮುತ್ತಯ, ಸಬ್ ಕಲೆಕ್ಟರ್ಸ್ ಆಫೀಸ್, ಕುಂದಾಪುರ.
೩೮ ,, ಪಿ. ವಿಟ್ಠಲ ಶೆಟ್ಟರು, ಅಧ್ಯಾಪಕ, ಪಡುಬಿದ್ರಿ.
೩೯ ,, ಅಂಬಾಡಿಬೀಡು ಸೂರ್ಯಣ್ಣ ಶೆಟ್ಟರು, ಬೊಂಬಾಯಿ.
೪೦ ,, ಎಂ. ಎಸ್. ಅಧಿಕಾರಿಗಳು, ಪ್ಲೀಡರ್, ಕಾರ್ಕಳ.
೪೧ ,, ಪಂಡಿತ್ ಕೆ. ನಾರಾಯಣ ರಾಯರು, ಕಾರ್ಕಳ.
೪೨ ,, ಪಿ. ವಿ. ಉಪಾಧ್ಯಾಯರು, ವಕೀಲ್, ಕಾರ್ಕಳ.
೪೩ ,, ಕೆ. ಎಂ. ಹೆಗ್ಡೇರು, ವಕೀಲ್, ಕಾರ್ಕಳ.
೪೪ ,, ಕಟಪಾಡಿ ರಂಗಪ್ಪ ಕಿಣಿಯರು, ಬೊಂಬಾಯಿ.
೪೫ ಡಾಕ್ಟರ್ ಯು. ಎಸ್. ರಾವ್, ಬೊಂಬಾಯಿ.
೪೬ ಶ್ರೀ ಕೆ. ವಿ. ಹೆಬ್ಬಾರ್, ಕಟ್ಟಂಗೆರೆ.
೪೭ ,, ವಿ. ವಿ. ಕುಣೇಮಾರ್, ವೆಲ್‌ಕಂ ಹೋಟೆಲ್, ಬೊಂಬಾಯಿ.
೪೮ ,, ಟಿ. ಮುತ್ತಪ್ಪ, ಹೆ. ಮಾ. ಫಿಶ್ಯರೀಸ್ ಸ್ಕೂಲ್, ಮಲ್ಪೆ.

೪೯ ಶ್ರೀ ಎಚ್. ವೀರಯ್ಯ ನಾಯ್ಕರು, ಅಧ್ಯಾಪಕ, ಕಾಪು.
೫೦ ,, ವಿ. ತುಕ್ರ ಶೆಟ್ಟರು, ಅಧ್ಯಾಪಕ, ಕನ್ಯಾನ, ಪುತ್ತೂರು.
೫೧ ,, ಪಿ. ಮಹಾಲಿಂಗ ಶೆಟ್ಟರು, ಅಧ್ಯಾಪಕ, ಕಾಪು.
೫೨ ,, ಬಿ. ವೆಂಕಪ್ಪ ರೈಗಳು, ಜಮಿಾನ್ದಾರ್, ಉಪ್ಪಿನಂಗಡಿ.
೫೩ ,, ಕುತ್ಯಾರು ರಾಮಣ್ಣ ಶೆಟ್ಟರು, ಕೇಂಜ ಕೆರೆಮನೆ, ಬೊಂಬಾಯಿ.
೫೪ ,, ಮಾಣಿಬೆಟ್ಟು ಕೃಷ್ಣಯ್ಯ ಹೆಗ್ಡೇರು, ಶಿರ್ವ.
೫೫ ,, ದೇಜಪ್ಪ ಸಿ. ಅಮಿಾನ್, ಕೈಪುಂಜಾಲ್.
೫೬ ,, ಕೆ. ನಾಗಪ್ಪಯ್ಯ, ಡಿ. ಇ. ಆಫೀಸು, ಉಡುಪಿ.
೫೭ ,, ಎಂ. ಶ್ರೀನಿವಾಸರಾವ್, ಡಿ. ಇ. ಆಫೀಸು, ಪುತ್ತೂರು.
೫೮ ,, ಕೆ. ಉಗ್ಗಪ್ಪ ಶೆಟ್ಟರು ಕುರಿಯಾಲ, ಬಂಟವಾಳ.
೫೯ ,, ಮುತ್ತಣ್ಣ ಬುಡಲೆ, ರೆಪ್ಯ, ಗುರುಪುರ.
೬೦ ,, ಬಿ. ಹೂವಯ್ಯ, ಹಾಲಿಕೋಡು, ಬಾರ್ಕೂರು.
೬೧ ,, ಕೆ. ಸಂಜೀವ ಶೆಟ್ಟರು, B. A., L. T. ಪುತ್ತೂರು.
೬೨ ,, ಅಡ್ವೆ ಕುಂಜರೈಮನೆ ರುಕ್ಕ ಶೆಟ್ಟರು, ಬೊಂಬಾಯಿ.
೬೩ ,, ಬೆಳ್ಮಣ್ಣು ಸೂರಪ್ಪ ಶೆಟ್ಟರು, ಪರೇಲರೋಡು, ಬೊಂಬಾಯಿ.
೬೪ ,, ಯು. ವಿ. ಆರಾಧ್ಯರು, ಜಮಿಾನ್ದಾರ್, ಉದ್ಯಾವರ.
೬೫ ,, ಕೊರಂಗ್ರಪಾಡಿ ದೇವಯ್ಯ ಹೆಗ್ಡೇರು, ಬೊಂಬಾಯಿ.
೬೬ ,, ಎಂ. ಬೊಮ್ಮಯ್ಯ ಶೆಟ್ಟರು, ಬಿ. ಎಂ. ಸ್ಕೂಲ್, ಉಚ್ಚಿಲ.
೬೭ ,, ಮಹಾಬಲ ಶೆಟ್ಟರು, ಟೀಚರ್ ಮೆನೇಜರ್, ಎಡ್ಮೇರು.
೬೮ ,, ನರ್ಸು ಶೆಟ್ಟರು, ಅಡ್ವೆ ಕಂಕಣಗುತ್ತು, ಬೊಂಬಾಯಿ.
೬೯ ,, ನಾಗಪ್ಪ ಶೆಟ್ಟರು, ಬೋ. ಹಾ. ಎ. ಶಾಲೆ, ಎರ್ಮಾಳು.
೭೦ ,, ಬಿ. ಭೋಜ ರಾಯರು, ಮೂಲ್ಕಿ.
೭೧ ,, ಶಂಕರ ಜ್ಯೋತಿಷಿ, ಚೆಂಡಿಯೆ
೭೨ ,, ಕೆ. ಗಣೇಶ ಸುಬ್ಬಪ್ಪಯ್ಯ, ಪ್ರೆಸಿಡೆಂಡ್, ಪಂ. ಬೋ. ಬೆಳ್ಳಾರೆ.

**ಮೇಲಿನ ಮಹಾಶಯರೆಲ್ಲರಿಗೂ 'ಕಿರಿಯರ ಪ್ರಪಂಚ'ವು ಕೃತಜ್ಞತೆಯನ್ನರ್ಪಿಸುತ್ತದೆ. ಇತರರೂ ಇದೇ ರೀತಿ ಪ್ರೋತ್ಸಾಹಿಸಬೇಕಾಗಿ ವಿನಂತಿ.**

**ಕಾರ್ಯದರ್ಶಿ.**

ಸರಸ ಸಾಹಿತ್ಯದ ರಸದೂಟ

# ಶ್ರೀ ಹೊದಲ್ನಾಡಿ ಗ್ರಂಥಮಾಲೆ

ಉಡುಪಿ

ವರ್ಷಕ್ಕೆ ಸುಮಾರು ೩ ಗ್ರಂಥಗಳು




ಸ್ಥಾಪನೆ:

ಪ್ರಬೋಧೂತ, ವಿಜಯ ದಶಮಿ

1930

ಸಂಪಾದಕರು:

ಕೆ. ಹೊನ್ನಯ್ಯ ಶೆಟ್ಟಿ

ಪಿ. ವೆಂಕಟರಮಣಾಚಾರ್ಯ

1935

**ಪ್ರಾರ್ಥನೆ**—ಸಾಹಿತ್ಯಗಳ ಮೇಲಾಟದ ಕಾಲವಿದು. ಕನ್ನಡವೂ ಅವುಗಳ ಸಹಪಂಕ್ತಿಯಲ್ಲಿ ತಲೆಯೆತ್ತಿ ನಿಂತು ಸ್ಪರ್ಧಿಸಲೆಂದು ಹಿರಿಯರ ಪ್ರಯತ್ನ. ಅವರ ಪ್ರಯತ್ನದಲ್ಲಿ ತುಸು ಬೆಂಬಲದ ಸೇವೆಯನ್ನು ಮಾಡಬೇಕೆಂದು 'ಕಿರಿಯರ' ಭಾವನೆ ಈ ಭಾವನೆಯೇ ದೈವಪ್ರೇರಣೆಯಿಂದ **'ಕಿರಿಯರ ಪ್ರಪಂಚ'**ವಾಗಿ ತಲೆಯೆತ್ತಿರುವುದು.

ಸಮಾಜದ ಏರಿಳಿಕೆಗಳು ಅದರ ಆಚಾರದಲ್ಲಡಕವಾಗಿವೆ. ಆಚಾರದ ಒಳಿತು ಹೀನತೆಗಳು ವಿಚಾರದ ಕೈಯೊಳಗಿವೆ ಇಂತಹ ಸುವಿಚಾರದ ಪಡಿಯಚ್ಚುಗಳನ್ನು ಸಾಧ್ಯವಾದ ಮಟ್ಟಿಗೆ ಸಂಗ್ರಹಿಸಿ ಸಮಾಜದ ಮುಂದಿಡುವುದೇ 'ಕಿರಿಯರ ಪ್ರಪಂಚ'ದ **'ತೊದಲ್ನುಡಿ'** ಗ್ರಂಥಮಾಲೆಯ ಹಿರಿ ಗುರಿ. ಮಾಲೆಯಲ್ಲಿ ಈ ಪಡಿಯಚ್ಚುಗಳು ಕಥೆ, ಕಾದಂಬರಿ, ಕವನ, ನಾಟಕಾದಿಗಳ ರೂಪದಲ್ಲಿ ಹೊರಬೀಳುವವು. ಈ ನಮ್ಮ ಕಾರ್ಯದಲ್ಲಿ ಭಾಷಾಭಿಮಾನಿಗಳೂ ದೇಶಾಭಿಮಾನಿಗಳೂ ಕೈಕೊಟ್ಟು ಸಹಕರಿಸಿ ನಮ್ಮಿಂದ ಸೇವೆಯನ್ನು ಮಾಡಿಸಿಕೊಳ್ಳಬೇಕಾಗಿ ಪ್ರಾರ್ಥನೆ.

**೧ ಸ್ಥಾಪಕರು**— ಗ್ರಂಥಮಾಲೆಗೆ ೫೦ ರೂಪಾಯಿ ಕೊಟ್ಟವರು. ಇವರಿಗೆ ಕೊನೆಯ ವರೆಗೂ ಗ್ರಂಥಮಾಲೆಯಲ್ಲಿ ಪ್ರಕಟವಾಗುವ ಗ್ರಂಥಗಳನ್ನು ಕೊಡುವೆವಲ್ಲದೆ ಆ ಎಲ್ಲಾ ಗ್ರಂಥಗಳಲ್ಲಿಯೂ ಇವರ ಹೆಸರನ್ನು ಪ್ರಕಟಿಸುವೆವು.

**೨ ರಕ್ಷಕರು**—ಗ್ರಂಥಮಾಲೆಗೆ ೨೫ ರೂಪಾಯಿ ಕೊಟ್ಟವರು. ಇವರಿಗೆ ಕೊನೆಯ ವರೆಗೂ ಗ್ರಂಥಗಳನ್ನು ಕೊಡಲಾಗುವುದಲ್ಲದೆ ೧೫ ಗ್ರಂಥಗಳಲ್ಲಿ ಇವರ ಹೆಸರನ್ನು ಪ್ರಕಟಿಸಲಾಗುವುದು.

**೩ ಆಶ್ರಯದಾತರು**— ಗ್ರಂಥಮಾಲೆಗೆ ೧೦ ರೂಪಾಯಿ ಕೊಟ್ಟವರು. ಇವರಿಗೆ ೧೦ ವರ್ಷಗಳವರೆಗೆ ಗ್ರಂಥಗಳನ್ನು ಕೊಡಲಾಗುವುದಲ್ಲದೆ ೧೦ ಗ್ರಂಥಗಳಲ್ಲಿ ಇವರ ಹೆಸರನ್ನು ಪ್ರಕಟಿಸಲಾಗುವುದು.

**೪ ಪೋಷಕರು**— ಗ್ರಂಥಮಾಲೆಗೆ ೫ ರೂಪಾಯಿ ಕೊಟ್ಟವರು. ಇವರಿಗೆ ೫ ವರ್ಷಗಳ ವರೆಗೆ ಗ್ರಂಥಗಳನ್ನು ಕೊಡಲಾಗುವುದಲ್ಲದೆ ೫ ಗ್ರಂಥಗಳಲ್ಲಿ ಇವರ ಹೆಸರನ್ನು ಪ್ರಕಟಿಸಲಾಗುವುದು.

**೫ ಚಂದಾದಾರರು**—ಆರಂಭದಲ್ಲಿ ಒಂದು ರೂಪಾಯಿ ಪ್ರವೇಶಧನವನ್ನು ಕೊಟ್ಟು ತಮ್ಮ ಹೆಸರನ್ನು ಚಂದಾದಾರರ ಪಟ್ಟಿಯಲ್ಲಿ ಸೇರಿಸಿಕೊಳ್ಳಬೇಕು. ಇವರಿಗೆ ಗ್ರಂಥಮಾಲೆಯ ಗ್ರಂಥಗಳನ್ನು ¾ ಬೆಲೆಗೆ ಕೊಡಲಾಗುವುದು. ಮುಂದಾಗಿ ತಿಳಿಸಿ ಕಳುಹುವ ವಿ. ಪಿ. ಯನ್ನು ತಿರಸ್ಕರಿಸಿದವರ ಹೆಸರನ್ನು ಪಟ್ಟಿಯಲ್ಲಿರಿಸುವುದೂ ಅಗತ್ಯ ಕಂಡ ಬದಲಾವಣೆಗಳನ್ನು ಮಾಡುವುದೂ ಗ್ರಂಥಮಾಲೆಯವರ ಇಷ್ಟ.

—ಕಾರ್ಯದರ್ಶಿ.

## ತೊದಲ್ನುಡಿ ಗ್ರಂಥಮಾಲೆಯ ಪುಸ್ತಕೆಗಳು.

**ಸ್ವತಂತ್ರ ಜೀವನೋಪಾಯ** (ದ್ವಿತೀಯಾವೃತ್ತಿ) ಬೆಲೆ ೦—೨—೬

ಜೀವನದ ಹೋರಾಟವನ್ನು ಕಣ್ಣ ಮುಂದಿರಿಸಿ ಸ್ವತಂತ್ರಜೀವನ ನಡೆಸುವ ವಿಧಾನವನ್ನು ವಿವರಿಸುವ ಚಿಕ್ಕ ಪುಸ್ತಕ.

'ಉಡುಪಿಯ ಕೆಲವು ಉತ್ಸಾಹೀ ತರುಣರು ಕೂಡಿ 'ತೊದಲ್ನುಡಿ ಗ್ರಂಥ ಮಾಲೆ'ಯೆಂಬುದನ್ನು ಹೊರಡಿಸಿರುವರು. ಅದರ 'ಮೊದಲನುಡಿ'ಯಿದು. ನಾಟಿಕೆಯ ರೂಪದಲ್ಲಿ ಬರೆಯಲಾಗಿದೆ....ಸಂವಾದದಲ್ಲೆಲ್ಲ ಪ್ರತಿಯೊಂದು ದೃಶ್ಯದಲ್ಲಿ, ಗಾದೆಗಳೂ ನಾನಾ ಉಪಮೆಗಳೂ ಅವಿರಳವಾಗಿ ಪೋಣಿಸಲ್ಪಟ್ಟವೆ. ಶೈಲಿಯು ಚಲೋದಿದೆ. ಇವರ ನುಡಿಗಳು ಹೆಚ್ಚಿ, **'ಕಿರಿಯರ ಪ್ರಪಂಚ'**ವು ಹಿರಿದೆನಿಸಲೆಂದು ಹಾರೈಕೆ.' — ಕಂಠೀರವ

'ಈಗಣ ನಿರುದ್ಯೋಗ, ದುಂದುಗಾರಿಕೆ, ಸಾಲಗಾರಿಕೆ ಮೊದಲಾದ ಪರೋಪಜೀವನಗಳಿಗೆ ಜನರು ಬಲಿಬೀಳದೆ, ಬೇರೆ ಬೇರೆ ವೃತ್ತಿಗಳಲ್ಲಿ ನಿರತರಾಗಿ, ಸ್ವಾಭಿಮಾನದಿಂದ ಸ್ವತಂತ್ರ ಜೀವನ ನಡಿಸುವಂತೆ ಚತುರ ಶಿಕ್ಷಿತ ತರುಣರು ಹಳ್ಳಿಗಳ ಸಂಘಟನಾಕಾರ್ಯವನ್ನು ಕೈಕೊಂಡು ಯಾವ ರೀತಿಯಲ್ಲಿ ಕೆಲಸಮಾಡಬೇಕೆಂಬ ಆದರ್ಶವನ್ನು ಈ ಚಿಕ್ಕ ವಹಿಯಲ್ಲಿ ನಿರ್ದೇಶಿಸಲಾಗಿದೆ. ಕರ್ನಾಟಕದ ಹಿರಿಯರ ಸಾಹಿತ್ಯಸೇವೆಗೆ ಬೆಂಬಲವೀಯಬೇಕೆಂಬ ಈ 'ಕಿರಿಯರ ಪ್ರಪಂಚ'ದ ಹಿರಿದಿಚ್ಛೆಯು ತಕ್ಕ ಆಶ್ರಯ ಪ್ರೋತ್ಸಾಹ ದೊರೆತು ಸಾರ್ಥಕವಾಗಿ, ಕಿರಿಯರು ಹಿರಿಯರಾಗಿಯೇ ಮೆರೆವಂತಾಗಲೆಂದು ಹಾರೈಕೆ.' — ನವಯುಗ.

**ಸಂಶಯ ಪಿಶಾಚಿ** (ದ್ವಿತೀಯ ಮುದ್ರಣ) ಬೆಲೆ ೦—೬—೦

ಅಳಿಯ ಸಂತಾನಕಟ್ಟಿನ, ಮುಖ್ಯವಾಗಿ ಬಂಟ ಸಮಾಜದ ಸದ್ಯದ ನಡವಳಿಕೆಯನ್ನೂ ಅದರಿಂದುಂಟಾಗುವ ದುಷ್ಪರಿಣಾಮಗಳನ್ನೂ ಚಿತ್ತವೇಧಕವಾಗಿ ಚಿತ್ರಿಸಿ ಸಮಾಜದೇಳಿಗೆಯ ಮಾರ್ಗವನ್ನು ಸೂಚಿಸುವ ನಾಟಕವಿದು.

''ಇದೊಂದು ಸಾಮಾಜಿಕ ನಾಟಕ. ಇದರಲ್ಲಿ ವಾಸ್ತವಿಕ ಸ್ಥಿತಿಗತಿಯೇ ಚಿತ್ರಿತವಾಗಿದ್ದು, ಮಂಗಳೂರೇ ಕಥಾಕ್ಷೇತ್ರವಾಗಿದೆ. ಪಾತ್ರಗಳ ಸಂಭಾಷಣೆಯು ಪ್ರತಿ

ಶಬ್ದವೂ ಭಾವಭರಿತವಾಗಿರುತ್ತದೆ. ಇದು ಆಧುನಿಕ ಶೈಲಿಯಿಂದ ಮನೋರಂಜಕವಾಗಿದೆ. ಪೂರ್ವಾಚಾರ ವಿಚಾರಗಳೆಂಬ ಪ್ರೇತಬಾಧೆಯಿಂದ ನಮ್ಮ ಸಮಾಜವು ದಿನೇ ದಿನೇ ಅಧಃಪತನ ಹೊಂದುತ್ತಿರುವ ಕಾಲದಲ್ಲಿ ಇಂತಹ ಪುಸ್ತಕಗಳು ಹೊರಬೀಳುವುದು ಶುಭಚಿಹ್ನೆಯಾಗಿದೆ. ಎಲ್ಲರೂ ಓದಿ ಪ್ರೋತ್ಸಾಹಿಸಬೇಕು.

—ಸ್ವದೇಶಾಭಿಮಾನಿ (ಸಾ. ಸಂಚಿಕೆ)

## ನಾಡ ಕಥೆಗಳು (ಭಾಗ ೧-ಪುನರ್ಮುದ್ರಣ) ಬೆಲೆ ೦—೨—೦

ದಕ್ಷಿಣ ಕನ್ನಡ ಜಿಲ್ಲೆಯ ವಿವಿಧ ಆಚಾರಾಂಧತೆಗಳ ಪಡಿಯಚ್ಚುಗಳನ್ನು ನೋಡಲಿಚ್ಛಿಸುವವರಿಗೆ ಒಂದೆಡೆ ಕೂಡಿಸಿಟ್ಟ ಚಿಕ್ಕ ಕಥೆಗಳ ಪುಸ್ತಕ

'ಈ ಪುಸ್ತಕದಲ್ಲಿ ಬೇರೆ ಬೇರೆ ಐದು ಜನರು ಬರೆದ, ಸಮಾಜದ ಸ್ವಾಭಾವಿಕ ಚಿತ್ರಗಳನ್ನೊಳಗೊಂಡ ಐದು ಕಥೆಗಳಿವೆ. ಮೊದಲನೆಯ ಕಥೆಯಾದ 'ತಿರುಪತಿ ಮುಡುಪಿನ ಕಳವು' ಎಂಬುವದರಲ್ಲಿ ಬರುವ ಶೆಟ್ಟರು ಭಟ್ಟರು ಎಲ್ಲೆಲ್ಲಿಯೂ ನೋಡಲು ಸಿಕ್ಕುವರು. 'ನಮ್ಮ ಶಾಸ್ತ್ರಗಳು' ಎಂಬ ಎರಡನೆಯ ಕಥೆಯಲ್ಲಿದ್ದ ವಸ್ತುಗಳನ್ನೊಳಗೊಂಡ ಕತೆಗಳು ಈಗಾಗಲೇ ಹಲವು ಪ್ರಸಿದ್ಧವಾಗಿವೆ. 'ಶೆಟ್ರ ಮನೆಯ ಮದುವೆ' ಎಂಬ ಕತೆಯಲ್ಲಿ ಎಡೆಯಾಡುತ್ತಿದ್ದ ಚುಚ್ಚು ನಗೆಯು ವಾಚಕರಿಗೆ ನಗೆಯೊಡನೆ ಮೈ ಜುಮ್ಮನ್ನು ಹುಟ್ಟಿಸುವುದು...'ಅಂದು ಇಂದು' ಎಂಬುದು ಸೊಗಸಾದ ಸಣ್ಣ ಕಥೆ. ಹೇಳುವ ಮಾತಿನ ರೀತಿಯೂ ಚೆನ್ನಾಗಿದೆ...ಇಲ್ಲಿಯ ಈ ತರುಣ ಕಥಾಲೇಖಕರ ಭವಿಷತ್ ಕಾರ್ಯದ ಕಡೆಗೆ ಹೆಚ್ಚು ಆಶೆಯ ನೋಟದಿಂದ ನಾವು ನೋಡುತ್ತಿದ್ದೇವೆ.

— ಜಯಕರ್ಣಾಟಕ.

"....ಸಣ್ಣ ಕಥೆಗಳ ಸಂಗ್ರಹ. 'ನಮ್ಮ ಶಾಸ್ತ್ರಗಳು' ಎಂಬ ಕತೆಯು ಹೃದಯಂಗಮವಾಗಿದೆ. 'ಅಂದು ಇಂದು' ಎಂಬ ದೃಶ್ಯವು ಮನೋಹರವಾಗಿದೆ....ಇವರ ಪ್ರಯತ್ನಗಳಿಗೆ ಶ್ರೇಯಸ್ಸನ್ನು ಕೋರುವೆವು.

— ಕಂಠೀರವ.

"...ಕಥೆಗಳೆಲ್ಲವೂ ನಮ್ಮ ಹಿಂದೂ ಸಮಾಜದಲ್ಲಿ, ಪುಣ್ಯ-ಪಾಪಗಳು, ಆಚಾರ ವಿಚಾರಗಳು, ಸಂಪ್ರದಾಯ, ಧರ್ಮಗುರುಗಳು ಇವುಗಳ ಮುಸುಕಿನಲ್ಲಿ ನಡೆಯುತ್ತಿರುವ ಹಲವು ಅನನ್ವಿತ ವಿಷಯಗಳನ್ನೆಲ್ಲ ತಕ್ಕ ಉದಾಹರಣೆಗಳಿಂದ ವಿವರಿಸಿ, ಕಾಲ ದೇಶಗಳನ್ನನುಸರಿಸಿ ಪೂರ್ವಾಚಾರಗಳಲ್ಲಿ ಸುಧಾರಣೆಯಾಗ ತಕ್ಕುದು ಅವಶ್ಯವೆಂಬ ತತ್ವವನ್ನು ಸಮರ್ಥಿಸುತ್ತವೆ. ಎಲ್ಲರೂ ಓದಿ ಮನನ ಮಾಡಬೇಕಾದ ಪುಸ್ತಕ.

— ಸುಬೋಧ.

**ಕುಶ - ಲವ** (ಶಿಕ್ಷಣ ಸಂಬಂಧವಾದ ನಾಟಕ) ಬೆಲೆ ೦—೪—೦

ಹಳೆಯ ಕಥೆಯನ್ನು ಹೊಸ ಮಾದರಿಯಲ್ಲಿ ಎರಕಹೊಯ್ದು ಪೌರಾಣಿಕ ನಾಟಕವಿದು. ಈಗಿನ ಶಿಕ್ಷಣದಲ್ಲಿರುವ ದೋಷಗಳನ್ನು ಎತ್ತಿ ತೋರಿಸಿ, ಸುಧಾರಣೆಯ ಹಾದಿಯನ್ನು ಸೂಚಿಸುವ ಗ್ರಂಥ.

**ಕಾವ್ಯಸಾಮ್ರಾಜ್ಯ** (ಕವಿತಾಸಂಗ್ರಹ) ಬೆಲೆ ೦—೧೨—೦

(ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ಮುನ್ನುಡಿಯೊಡನೆ)

**'ಸಂಯುಕ್ತ ಕರ್ನಾಟಕ'**ವು ಅನ್ನುವುದೇನೆಂದರೆ—

**'....ಆಧುನಿಕ ಕವಿಗಳ ಕವಿತೆಗಳ ಇಂತಹ ಉತ್ತಮ ಸಂಗ್ರಹವನ್ನು ಈ ವರೆಗೆ ಯಾರೂ ಒದಗಿಸಿ ಕೊಟ್ಟಿರುವುದಿಲ್ಲ.** ಇದಕ್ಕಾಗಿ ಕನ್ನಡಿಗರು 'ಕಿರಿಯರ ಪ್ರಪಂಚ'ಕ್ಕೆ ಆಭಾರ ಮನ್ನಿಸಬೇಕು. ಆದರೆ ಶಬ್ದದಿಂದಲ್ಲ; 'ಕಾವ್ಯಸಾಮ್ರಾಜ್ಯ'ವನ್ನು ಕೊಂಡುಕೊಂಡು ಧನರೂಪದಿಂದ.'

**'ಜಯಕರ್ಣಾಟಕ'**ವು ಹೀಗೆನ್ನುತ್ತದೆ—

''....ಆಧುನಿಕ ಕವಿಗಳ ಕವನಗಳ ಸಂಗ್ರಹವಿದು. ಉತ್ಸಾಹಿಗಳಾದ 'ಕಿರಿಯರು' ಮಾಡಿದ ಸಾಹಸವನ್ನು ನೋಡಿ ಕೌತುಕವೆನಿಸಿತು.'

ಶ್ರೀ. ತಿ. ನ. ಶ್ರೀಕಂಠಯ್ಯನವರು ಬೆಂಗಳೂರಿಂದ ಹೀಗೆ ಬರೆಯುತ್ತಾರೆ—

'...ಗ್ರಂಥವೂ ಒಳಗಿನ ವಿಷಯವೂ ಎರಡೂ ಅಂದವಾಗಿವೆ. ತಮ್ಮ ಸಾಹಿತ್ಯ ಸೇವೆ ಯಶಸ್ವಿಯಾಗಿ ಮುಂದುವರಿಯಲೆಂದು ಹಾರೈಸುತ್ತೇನೆ.'

ಪ್ರೊಫೆಸರ್ ವಿ. ಕೆ. ಗೋಕಾಕರು ಪುಣೆಯಿಂದ ಹೀಗೆ ತಿಳಿಸುತ್ತಾರೆ—

'ಒಳಗೂ ಹೊರಗೂ 'ಸಾಮ್ರಾಜ್ಯ'ವು ಅಂದವಾಗಿದೆ. ಎಲ್ಲ ಭಾಗಗಳ ಕವಿಗಳ ಕೃತಿಗಳು ಪ್ರಾತಿನಿಧಿಕವಾಗಿ ಅದರಲ್ಲಿ ಬಂದು ನಿಂತಿವೆ... ಅತ್ಯಂತ ಸ್ತುತ್ಯವಾಗಿದೆ.'

ಡಾ. ಟಿ. ಮಾಧವ ಪೈ, M. B. & B. S ಉಡುಪಿ ಇವರು ಹೀಗೆ ಬರೆಯುತ್ತಾರೆ—

'...ಕಾವ್ಯಸಾಮ್ರಾಜ್ಯ'ವು ಕನ್ನಡ ಆಧುನಿಕ ಸಾಹಿತ್ಯಕ್ಕೆ ರತ್ನಪ್ರಾಯವಾಗಿದೆ'

''...ಕಾವ್ಯಸಾಮ್ರಾಜ್ಯದಲ್ಲಿ ವಿಶ್ವಕರ್ನಾಟಕದೊಳಗಿನ ಬಹುಶಃ ಎಲ್ಲಾ ಪ್ರಮುಖ ಕವಿಗಳ ಕವನಗಳ ಆಯ್ಕೆಯೊಂದನ್ನು ಕೊಡುವ ಪ್ರಯತ್ನಮಾಡಲಾಗಿದೆ....ಅದರ ಬಾಹ್ಯಾಂಗವು ನಯನ ಮನೋಹರವಾಗಿರುವಂತೆಯೇ ಅಂತರಂಗವೂ ಚೇತೋಪಹಾರಿಯಾಗಿದೆ.

—ಹನುಮಂತರಾವ್ ಮಾಂಜರೇಕರ, B. A. (ಕಾನಡಾವೃತ್ತದಲ್ಲಿ)

## OPINION OF THE "HINDU" MADRAS

**KAVYA SAMRAJYA:**—Published by **Kiriyara Prapancha, Udipi.**

PRICE 0—12—0

When the country is in the throes of a new awakening, every attempt to advance the nation's cause should be welcomed. The national edifice, to be lasting, has to be built on the sure foundation of culture. When so many modern thoughts, some of an alien origin, are seemingly in conflict with established traditions of the country the need for directing young mind, in the proper direction becomes all the more pressing. The book under review is a collection of over thirty poems written by various authors of the Kannada speaking portion of the country The topics are varied. Some of the compositions offer light reading, while others are thought-provoking; but through all there runs the spirit of awakened India, with a nationalistic outlook on life, and great love for the country; its language and culture. 'Kiriyara Prapancha' has chosen the poems carefully and though the poe's are modern and young, the work is such as to appeal to young and old alike.

"....ಇದೀಗ ಈ 'ಕಾವ್ಯಸಾಮ್ರಾಜ್ಯ'ವು ಹೆಚ್ಚು ಭಾರವುಳ್ಳದ್ದಾಗಿದೆ... ಕನ್ನಡ ಕವಿಗಳೆಲ್ಲ ಒಂದುಗೂಡಿದ್ದಾರೆ. ಕವಿತೆಗಳ ಸವಿಯನ್ನುಣ್ಣಬೇಕಾದರೆ 'ಕಾವ್ಯಸಾಮ್ರಾಜ್ಯ'ವನ್ನೇ ನೋಡಬೇಕು; ತರಿಸಿ ಓದಬೇಕು. ಈ ಸರ್ವಶ್ಲಾಘನೀಯ ಯತ್ನವನ್ನು ಪ್ರೋತ್ಸಾಹಿಸದಿದ್ದರೆ ಮತ್ತಾವುದನ್ನು?

—ಬಡವರ ಬಂಧು

"....ಈ ಕವನ ಸಂಗ್ರಹದಲ್ಲಿ ಒಟ್ಟು ೩೮ ಆಧುನಿಕ ಕೃತಿಗಳಿವೆ. ಕರ್ನಾಟಕದ ಎಲ್ಲಾ ಪ್ರಾಂತ್ಯಗಳ ಕವಿಗಳ ಕೃತಿಗಳೂ ಇಲ್ಲಿ ಆಯ್ದು ಸೇರಿಸಲ್ಪಟ್ಟಿವೆ. ಕಥಕ, ವರ್ಣಕ, ಭಾವೋದ್ಯೋತಕವಾದ ಎಲ್ಲಾ ಬಗೆಯ ಕವಿತೆಗಳೂ ಸೇರಿವೆ...."

—ಪ್ರಬುದ್ಧ ಕರ್ಣಾಟಕ.

"...ಕವಿಕುಲ ತಿಲಕರ ಕವನಗಳನ್ನು ಪೋಣಿಸಿ ಈ 'ಕಾವ್ಯಸಾಮ್ರಾಜ್ಯ'ವೆಂಬ ಮಾಲೆಮಾಡಿ 'ಕಿರಿಯರ ಪ್ರಪಂಚ'ವು ಕನ್ನಡಿಗರ ಕೊರಳಿಗೆ ಹಾಕಿರುವುದು. ಕವಿತಾ ವಾಚಕ ವರ್ಗವು ಅದರ ಸುಗಂಧವನ್ನಾಘ್ರಾಣಿಸಿ ಆನಂದಿಸದಿರದು. **ಸುಲಭ ಬೆಲೆಗೆ ಇಂತಹ ಉಚ್ಚ ಸಾಹಿತ್ಯವನ್ನೊದಗಿಸುತ್ತಿರುವ ಕಿರಿಯರ ಪ್ರಪಂಚಕ್ಕೆ** ಹಿರಿಯರ ಬೆಂಬಲವೂ ಕನ್ನಡಿಗರ ಪ್ರೋತ್ಸಾಹವೂ ಯಥೇಷ್ಟ ದೊರೆತು 'ಮಾಲೆ'ಯು ನಮ್ಮ ಜಿಲ್ಲೆಗೇ ಭೂಷಣಪ್ರಾಯವಾಗುವಂತೆ ಬೆಳೆದು ಬರಲೆಂದು ಹಾರೈಸುವೆವು.

— ಸ್ವದೇಶಿ ಪ್ರಚಾರಕ.

## ಮಧುವನ (ಕಥಾಸಂಗ್ರಹ) ಬೆಲೆ ೧—೮—೦

**ಕಥೆಗಳು ೨೫] ಮಧುವಿಗಿಂತಲು ಮಧುರ [೨೫೬ ಪುಟಗಳು.**

**ಕಥೆಗಳೊಂದಿಗೆ ಕಥೆಗಾರರ ಪರಿಚಯವೂ ಪಡಿಯಚ್ಚುಗಳೂ ಪ್ರಕಟವಾಗಿವೆ.**

**ಹಬ್ಬದೂಟಕ್ಕಿಂತಲೂ ಸವಿ! ಹೊಸ ಉಡುಗೆಗಿಂತಲೂ ಚೆಲು!**

ಈ ಗ್ರಂಥದಲ್ಲಿ ಕರ್ಣಾಟಕದ ಎಲ್ಲ ವಿಭಾಗಗಳ ಕಥೆಗಾರರೂ ಒಂದುಗೂಡಿದ್ದಾರೆ.

ಪಂಡಿತ ತಾರಾನಾಥ ರಾಯರು, ಶ್ರೀ. ಅ. ನ. ಕೃಷ್ಣರಾಯರು, ಶ್ರೀ. ಕಡೆಂಗೋಡ್ಲು ಶಂಕರ ಭಟ್ಟರು, ಶ್ರೀ. ಕೆ. ಗೋಪಾಲಕೃಷ್ಣರಾಯರು, ಶ್ರೀ. ಎಂ ಎನ್ ಕಾಮತರು, ಶ್ರೀ. ಶಿವರಾಮ ಕಾರಂತರು, ಶ್ರೀ. ಕುಡ್ಪಿ ವಾಸುದೇವ ಶೆಣೈಯವರು, ಶ್ರೀ. ಕೊರಡ್ಕಲ್ ಶ್ರೀನಿವಾಸ ರಾಯರು, ಶ್ರೀ ಬಿ ಅಶ್ವತ್ಥನಾರಾಯಣ ರಾಯರು, ಮಿಸೆಸ್ ಬಿ. ಟಿ ಜಿ. ಕೃಷ್ಣ ಅವರು ಮೊದಲಾದ ೨೫ ಕನ್ನಡ ಕಥೆಗಾರರ ೨೫ ಕಥೆಗಳು.

**ಕನ್ನಡದಲ್ಲಿ ಇಂತಹ ಗ್ರಂಥವು ತೀರಾ ವಿರಳ.**
**ಆದರೂ ಬೆಲೆ ಬಹು ಸುಲಭ.**

ಕನ್ನಡದಲ್ಲಿ ಈ ಬಗೆಯ ಗ್ರಂಥವೊಂದಿದ್ದರೆ ಅದೇ, ಈಗತಾನೆ ಹೊಸತಾಗಿ, ಹೊಸ ರೂಪತಾಳಿ, ಹೊರಬಿದ್ದ 'ಮಧುವನ'ವೊಂದೇ.

ಸ್ವತಂತ್ರ ಜೀವನೋಪಾಯ, ಸಂಶಯ ಪಿಶಾಚಿ, ಕುಶಲವ, ಕಾವ್ಯಸಾಮ್ರಾಜ್ಯ ಇವು ಮೈಸೂರಿನ, ಸಂಶಯ ಪಿಶಾಚಿ, ಕುಶಲವ, ಕಾವ್ಯಸಾಮ್ರಾಜ್ಯ ಇವು ಮದ್ರಾಸಿನ, ಕಾವ್ಯಸಾಮ್ರಾಜ್ಯವು ಬೊಂಬಾಯಿಯ ಟೆಕ್ಸ್ಟ್‌ಬುಕ್ ಕಮಿಟಿಗಳಿಂದ ಮಂಜೂರಾಗಿವೆ.

## ಸದ್ಯವೇ ಪ್ರಕಟವಾಗಲಿವೆ—

೧ ಪ್ರತೀಕಾರ
೨ ಮೀರಾಬಾಯಿ
೩ ಹೂಬುಟ್ಟಿ
೪ ಯೋಗಿಯೊ ಭೋಗಿಯೊ
೫ ಏಕಾಂಕ ನಾಟಕ ಸಂಗ್ರಹ
೬ ಕಾದಂಬರಿಯೊಂದು
೭ ವಿಮರ್ಶಾಗ್ರಂಥವೊಂದು
. . . .



Printed by S. U. Paniady at Thulunad Press, Udipi